KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೨ | ಬೆಂಗಳೂರು, ಗುರುವಾರ, ನವೆಂಬರ್ ೨೯, ೨೦೦೭ (ಮಾರ್ಗಶಿರ ೮, ಶಕ ವರ್ಷ ೧೯೨೯) | ಸಂಚಿಕೆ ೪೭ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

ವಿಷಯ: ಶ್ರೀ ಎಂ.ಎಂ. ದೊಡ್ಡಮನಿ, ಸಹಾಯಕ ಸರ್ಕಾರಿ ಅಭಿಯೋಜಕರು, 4ನೇ ಅಧಿಕ ಜೆ.ಎಂ.ಎಫ್.ಸಿ.
ನ್ಯಾಯಾಲಯ, ಬೆಳಗಾವಿ ಅವರ ಜನ್ಮ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ
ನೇಮಕಗೊಂಡ ಸಹಾಯಕ ಸರ್ಕಾರಿ ಅಭಿಯೋಜಕರ-ವ-ಸಹಾಯಕ ಸರ್ಕಾರಿ ವಕೀಲರ
(ಸಮೂಹ-ಬಿ) ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ-ಆದೇಶ.

ಓದಲಾಗಿದೆ:
1. ಸರ್ಕಾರದ ಅಧಿಸೂಚನೆ ಸಂ. ಲಾ 56 ಪಿಪಿಇ 99, ದಿನಾಂಕ 12.1.2000.
2. ಸರ್ಕಾರದ ಅಧಿಸೂಚನೆ ಸಂ. ಲಾ 229 ಪಿಪಿಇ 2003, ದಿನಾಂಕ 4.12.2003.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಕೇಂಸ/ವಿವ/61(ಬಿ)/2001-02, ದಿನಾಂಕ 31.5.2007.

ಪ್ರಸ್ತಾವನೆ:

ಶ್ರೀ ಎಂ.ಎಂ. ದೊಡ್ಡಮನಿ ಇವರು ಮೇಲೆ ಓದಲಾದ (1)ರ ಸರ್ಕಾರದ ಆದೇಶ ದಿನಾಂಕ 12.1.2000 (ಕ್ರ.ಸಂ. 44) ರನ್ವಯ ಗ್ರಾಮೀಣ ಕೃಪಾಂಕದ ಅಭ್ಯರ್ಥಿ ವರ್ಗದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಆಯ್ಕೆಯಾಗಿದ್ದು, ತದನಂತರ ಗ್ರಾಮೀಣ ಕೃಪಾಂಕದ ಅಭ್ಯರ್ಥಿಗಳನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕಿದ್ದು, ನಂತರ ಮೇಲೆ ಓದಲಾದ (2)ರ ಸರ್ಕಾರದ ಆದೇಶ ದಿನಾಂಕ 4.12.2003 (ಕ್ರ.ಸಂ. 22)ರನ್ವಯ ಪುನಃ ಸಹಾಯಕ ಸರ್ಕಾರಿ ಅಭಿಯೋಜಕರ ಸೇವೆಗೆ ವಿಲೀನಗೊಳಿಸಲಾಗಿದೆ.

ಮೇಲೆ ಓದಲಾದ (3)ರ ದಿನಾಂಕ 31.5.2007ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಸದರಿ ಅಧಿಕಾರಿಯವರ ಜನ್ಮ ದಿನಾಂಕ ಅಂಗೀಕಾರ ಸಂಬಂಧದಲ್ಲಿ ಈ ಕೆಳಕಂಡ ದಾಖಲಾತಿಗಳನ್ನು ಒದಗಿಸಿರುತ್ತಾರೆ.

1) ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿ

2) ಪ್ರಮಾಣ ಪತ್ರ ದಿನಾಂಕ 27.2.2002.

3) ಗದಗ ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ದಾಖಲಾಗಿದ್ದ ಕ್ರಿ.ಮಿ. ನಂ. 15/2002ರ ಜೆರಾಕ್ಸ್ ಪ್ರತಿ ಹಾಗೂ ನ್ಯಾಯಾಲಯದ ಆದೇಶ ದಿನಾಂಕ 6.3.2002 ಮತ್ತು ಆದೇಶ ದಿನಾಂಕ 16.1.2002ರ ಜೆರಾಕ್ಸ್ ಪ್ರತಿ.

4) ಮುಳಗುಂದ ಪಟ್ಟಣ ಪಂಚಾಯ್ತಿಯ ಮುಖ್ಯಾಧಿಕಾರಿಗಳು ನೀಡಿರುವ ಜನನ ಪ್ರಮಾಣ ಪತ್ರ.

5) ಶ್ರೀ ಎಂ.ಎಂ. ದೊಡ್ಡಮನಿ ಅವರ ತಂದೆಯವರು ಸಲ್ಲಿಸಿರುವ ಪ್ರಮಾಣ ಪತ್ರ ದಿನಾಂಕ 27.2.2002.

ಸದರಿ ಅಧಿಕಾರಿಯವರ ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಯಲ್ಲಿ ಅವರ ಜನ್ಮ ದಿನಾಂಕವು 1.5.1961 ಎಂದು ದಾಖಲಾಗಿರುತ್ತದೆ. ಮುಳಗುಂದ ಪಟ್ಟಣ ಪಂಚಾಯಿತಿಯ ಮುಖ್ಯಾಧಿಕಾರಿಗಳು ನೀಡಿರುವ ಪ್ರಮಾಣ ಪತ್ರದಲ್ಲಿ ಅವರ ಜನ್ಮ ದಿನಾಂಕವು 18-8-1962 ಎಂದು ದಾಖಲಾಗಿರುತ್ತದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 280 ಪಿಪಿಇ 2007, ಬೆಂಗಳೂರು ದಿನಾಂಕ: 28ನೇ ಸೆಪ್ಟೆಂಬರ್, 2007**

ಶ್ರೀ ಎಂ.ಎಂ. ದೊಡ್ಡಮನಿ, ಸಹಾಯಕ ಸರ್ಕಾರಿ ಅಭಿಯೋಜಕರು, 4ನೇ ಅಧಿಕ ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೆಳಗಾವಿ ಅವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) ಶಾಸನ 1974ರ ಕಲಂ-3ರ ಉಪಕಲಂ-2ರ ಅನ್ವಯ 1-5-1961 (ಒಂದು ಐದು ಸಾವಿರದ ಒಂಬೈನೂರಾ ಅರವತ್ತೊಂದು) ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸ ಮತ್ತು ಅಭಿಯೋಗ).

ಪಿ.ಆರ್. 1752

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ರಾಜ್ಯ ಚುನಾವಣಾ ಆಯೋಗದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ತಾತ್ಕಾಲಿಕವಾಗಿ ಉಪ ಕಾರ್ಯದರ್ಶಿ ಹುದ್ದೆಯಾಗಿ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ರಾಜ್ಯ ಚುನಾವಣಾ ಆಯುಕ್ತರು, ಕರ್ನಾಟಕ ಇವರ ಅ.ಸ. ಪತ್ರ ಸಂಖ್ಯೆ: ರಾಚುಆ 56 ಸಿಬ್ಬಂದಿ 2003, ದಿನಾಂಕ 3.5.2007.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 3.5.2007ರ ಅರೆ ಸರ್ಕಾರಿ ಪತ್ರದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಳು ಮತ್ತು ಬೃಹತ್ ಬೆಂಗಳೂರು ಚುನಾವಣೆಗಳನ್ನು ರಾಜ್ಯ ಚುನಾವಣಾ ಆಯೋಗವು 2007-08ನೇ ಸಾಲಿನಲ್ಲಿ ಮುಕ್ತಾಯಗೊಳಿಸ ಬೇಕಾಗಿರುವುದರಿಂದ, ಚುನಾವಣಾ ಕೆಲಸ ಕಾರ್ಯಗಳಲ್ಲಿ ಸಾಕಷ್ಟು ಅನುಭವ ಪಡೆದಿರುವ ಅಧಿಕಾರಿಯ ಸೇವೆಯು ಈ ಚುನಾವಣೆಗಳ ಸಮಯದಲ್ಲಿ ಆಯೋಗಕ್ಕೆ ಅಗತ್ಯವಾಗಿರುವುದರಿಂದಲೂ ಹಾಗೂ ಚುನಾವಣೆಗಳು ಮುಕ್ತಾಯವಾದ ನಂತರವೂ ಚುನಾವಣಾ ಅಂಕಿ ಅಂಶಗಳ ಕ್ರೋಢೀಕರಣ ಕೆಲಸವನ್ನು ನಿರ್ವಹಿಸಬೇಕಾಗಿರುವುದರಿಂದ ರಾಜ್ಯ ಚುನಾವಣಾ ಆಯೋಗದ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಹೆಚ್.ಎಸ್. ಉದಯಶಂಕರ್ ಇವರಿಗೆ ಉಪ ಕಾರ್ಯದರ್ಶಿಯಾಗಿ ಬಡ್ತಿ ನೀಡಿದ ಸಂದರ್ಭದಲ್ಲಿ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಉಪ ಕಾರ್ಯದರ್ಶಿ ಹುದ್ದೆಯನ್ನಾಗಿ ಉನ್ನತೀಕರಿಸಿ ರಾಜ್ಯ ಚುನಾವಣಾ ಆಯೋಗದಲ್ಲಿಯೇ ಮುಂದುವರಿಸುವಂತೆ ಕೋರಿದ್ದಾರೆ.

ಅದರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 198 ಸಅಸೇ 2007, ಬೆಂಗಳೂರು ದಿನಾಂಕ: 26ನೇ ಸೆಪ್ಟೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ರಾಜ್ಯ ಚುನಾವಣಾ ಆಯೋಗದಲ್ಲಿರುವ ಅಧೀನ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಹೆಚ್.ಎಸ್. ಉದಯಶಂಕರ್ ಇವರಿಗೆ ಉಪ ಕಾರ್ಯದರ್ಶಿ ಹುದ್ದೆಗೆ ಬಡ್ತಿಯ ಮೇಲೆ ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಸದರಿಯವರು ವಯೋ ನಿವೃತ್ತಿ ಹೊಂದಲಿರುವ ದಿನಾಂಕ 31-01-2008ರವರೆಗೆ ಅಧೀನ ಕಾರ್ಯದರ್ಶಿಯ ಹುದ್ದೆಯನ್ನು ಉಪ ಕಾರ್ಯದರ್ಶಿ ಹುದ್ದೆಗೆ ತಾತ್ಕಾಲಿಕವಾಗಿ ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1135 ವೆಚ್ಚ-5 2007, ದಿನಾಂಕ 21-5-2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಸೇವೆಗಳು-3).

ಪಿ.ಆರ್. 1754

**ಒಳಾಡಳಿತ ಸಚಿವಾಲಯ**

**ವಿಷಯ:** ಬೆಳಗಾಂ ಜಿಲ್ಲಾ ಮಹಿಳಾ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 1/06ರ ತನಿಖೆಯಲ್ಲಿ ಲೋಪವೆಸಗಿದ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ(5) 40/2006-07, ದಿನಾಂಕ 18.6.2007.

ಪ್ರಸ್ತಾವನೆ:

ಶ್ರೀಮತಿ ಗೌರಮ್ಮ ಶಿವಲಿಂಗಪ್ಪ ಹೇರವಾಡ, ಮಹಿಳಾ ಪಿ.ಎಸ್.ಐ. ಹಾಲಿ ಮಹಿಳಾ ಪಿ.ಐ., ಡಿ.ಸಿ.ಆರ್.ಇ., ಬೆಳಗಾಂ, ಶ್ರೀ ಎನ್.ವಿ. ಬರಮನಿ, ಪೊಲೀಸ್ ಶ್ರೀ ಕೆ. ನಾಗರಾಜ, ಪೊಲೀಸ್ ಇನ್ಸ್‌ಪೆಕ್ಟರ್, ಹಾಲಿ ನಗರ ವಿಶೇಷ ಶಾಖೆ, ಬೆಂಗಳೂರು, ಇನ್ಸ್‌ಪೆಕ್ಟರ್, ಹಾಲಿ ಅಥಣಿ ವೃತ್ತ, ಬೆಳಗಾಂ ಜಿಲ್ಲೆ ಮತ್ತು ಶ್ರೀ ಕೆ.ಎಸ್. ಆಡಿ, ಹಾಲಿ ನಿವೃತ್ತ ಎಸ್.ಪಿ. ರವರುಗಳು ಬೆಳಗಾಂ ಜಿಲ್ಲಾ ಮಹಿಳಾ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 1/06 ಕಲಂ 498(ಎ), 304(ಬಿ) 306 ರೆ/ವಿ 34 ಐಪಿಸಿ ಮತ್ತು 3,4 ಮತ್ತು 6 ಡಿಪಿ ಕಾಯ್ದೆ ಪ್ರಕರಣದಲ್ಲಿ ಸಮರ್ಪಕ ತನಿಖೆ ಮಾಡದೇ ಇರುವುದು ಡಿ.ಜಿ.ಪಿ., ಸಿ.ಓ.ಡಿ. ಬೆಂಗಳೂರು ರವರ ವರದಿಯಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಈ ಕೆಳಕಂಡ ಪೊಲೀಸ್ ಅಧಿಕಾರಿಗಳಾದ

1) ಶ್ರೀಮತಿ ಗೌರಮ್ಮ ಶಿವಲಿಂಗಪ್ಪ ಹೇರವಾಡ, ಮಹಿಳಾ ಪಿ.ಎಸ್.ಐ. ಹಾಲಿ ಮಹಿಳಾ ಪಿ.ಐ., ಡಿ.ಸಿ.ಆರ್.ಇ., ಬೆಳಗಾಂ.

2) ಶ್ರೀ ಕೆ. ನಾಗರಾಜ, ಪೊಲೀಸ್ ಇನ್ಸ್‌ಪೆಕ್ಟರ್, ಹಾಲಿ ನಗರ ವಿಶೇಷ ಶಾಖೆ, ಬೆಂಗಳೂರು.

3) ಶ್ರೀ ಎನ್.ವಿ. ಬರಮನಿ, ಪೊಲೀಸ್ ಇನ್ಸ್‌ಪೆಕ್ಟರ್, ಹಾಲಿ ಅಥಣಿ ವೃತ್ತ, ಬೆಳಗಾಂ ಜಿಲ್ಲೆ

ಇವರುಗಳ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ನಿಯಮಗಳು, 1965/89ರ ನಿಯಮ 6 ಉಪ ನಿಯಮ 2 ಮತ್ತು 8ರ ಅನ್ವಯ ಮತ್ತು ಶ್ರೀ ಕೆ.ಎಸ್. ಆಡಿ, ನಿವೃತ್ತ ಎಸ್.ಪಿ. ರವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214(ಎ) ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಪ್ರಾಂಶುಪಾಲರು, ಕೆ.ಎಸ್.ಪಿ.ಟಿ.ಎಸ್., ಖಾನಾಪುರ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಕೋರಿ ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ, ಬೆಂಗಳೂರುರವರು ಸರ್ಕಾರಕ್ಕೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 258 ಪೊಸಿಪ 2007, ಬೆಂಗಳೂರು ದಿನಾಂಕ: 24ನೇ ಸೆಪ್ಟೆಂಬರ್, 2007**

ಬೆಳಗಾಂ ಜಿಲ್ಲಾ ಮಹಿಳಾ ಪೊಲೀಸ್ ಠಾಣೆಯಲ್ಲಿ ದಾಖಲಾದ ಮೊಕದ್ದಮೆ ಸಂಖ್ಯೆ: 1/06 ಕಲಂ 498(ಎ), 304(ಬಿ) 306 ರೆ/ವಿ 34 ಐಪಿಸಿ ಮತ್ತು 3, 4 ಮತ್ತು 6 ಡಿಪಿ ಕಾಯ್ದೆ ಪ್ರಕರಣದಲ್ಲಿ ಸಮರ್ಪಕ ತನಿಖೆ ಮಾಡದೇ ಲೋಪವೆಸಗಿರುವುದು ಆಪಾದಿತ ಪೊಲೀಸ್ ಅಧಿಕಾರಿಗಳಾದ ಶ್ರೀಮತಿ ಗೌರಮ್ಮ ಶಿವಲಿಂಗಪ್ಪ ಹೇರವಾಡ, ಮಹಿಳಾ ಪಿ.ಎಸ್.ಐ. (ಹಾಲಿ ಮಹಿಳಾ ಪಿ.ಐ., ಡಿ.ಸಿ.ಆರ್.ಇ., ಬೆಳಗಾಂ) ಶ್ರೀ ಕೆ. ನಾಗರಾಜ, ಪೊಲೀಸ್ ಇನ್ಸ್‌ಪೆಕ್ಟರ್, (ಹಾಲಿ ನಗರ ವಿಶೇಷ ಶಾಖೆ, ಬೆಂಗಳೂರು) ಶ್ರೀ ಎನ್.ವಿ. ಬರಮನಿ, ಪೊಲೀಸ್ ಇನ್ಸ್‌ಪೆಕ್ಟರ್, (ಹಾಲಿ ಅಥಣಿ ವೃತ್ತ, ಬೆಳಗಾಂ ಜಿಲ್ಲೆ) ರವರುಗಳ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ನಿಯಮಗಳು, 1965/89ರ ನಿಯಮ 6 ಉಪ ನಿಯಮ (2) ಮತ್ತು 8ರನ್ವಯ ಮತ್ತು ಶ್ರೀ ಕೆ.ಎಸ್. ಆಡಿ, ನಿವೃತ್ತ ಎಸ್.ಪಿ ರವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214(ಎ)ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿದೆ. ಈ ಇಲಾಖಾ ವಿಚಾರಣೆ ನಡೆಸಲು ಪ್ರಾಂಶುಪಾಲರು, ಕೆ.ಎಸ್.ಪಿ.ಟಿ.ಎಸ್., ಖಾನಾಪುರ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 19 ಸೇಇವಿ 2001, ದಿನಾಂಕ 28–6–2001ರನ್ವಯ ತನಿಖೆ ನಡೆಸಿ 3 ತಿಂಗಳೊಳಗಾಗಿ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1755

**ಇಂಧನ ಸಚಿವಾಲಯ**

ವಿಷಯ: ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಾವಿನಹುಂಡ ಮತ್ತು ಸೋಗಿಯಲ್ಲಿ 10 kw x 5 ಸಾಮರ್ಥ್ಯದ ಎರಡು ಏರೋಜನರೇಟರ್ಸ್‌ನ ಸ್ಥಾಪನೆಗಾಗಿ ಅನುಮತಿ ನೀಡುವ ಬಗ್ಗೆ.

ಓದಲಾಗಿದೆ: ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ಬಿಎಂ/2007/2017, ದಿನಾಂಕ 7.9.2007.

ಪ್ರಸ್ತಾವನೆ:

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಬೆಳಗಾಂ ಜಿಲ್ಲೆಯ ಮಾವಿನಹುಂಡ ಮತ್ತು ಬಳ್ಳಾರಿ ಜಿಲ್ಲೆಯ ಸೋಗಿ ಎಂಬಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ಪ್ರಾದರ್ಶಿಕ ಪವನ ವಿದ್ಯುತ್ ಯೋಜನೆಯ ಸ್ಥಳದಲ್ಲಿ 10 kw x 5 ಸಾಮರ್ಥ್ಯದ ಎರಡು ಏರೋಜನರೇಟರ್ಸ್‌ನ ಸ್ಥಾಪನೆಗಾಗಿ ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 333 ಎನ್‌ಸಿಇ 2007, ಬೆಂಗಳೂರು ದಿನಾಂಕ: 26ನೇ ಸೆಪ್ಟೆಂಬರ್, 2007**

ಸರ್ಕಾರವು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಬೆಳಗಾಂ ಜಿಲ್ಲೆಯ ಮಾವಿನಹುಂಡ ಮತ್ತು ಬಳ್ಳಾರಿ ಜಿಲ್ಲೆಯ ಸೋಗಿ ಎಂಬಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ಪ್ರಾದರ್ಶಿಕ ಪವನ ವಿದ್ಯುತ್ ಯೋಜನೆಯ ಸ್ಥಳದಲ್ಲಿ 10 kw x 5 ಸಾಮರ್ಥ್ಯದ ಎರಡು ಏರೋಜನರೇಟರ್ಸ್‌ನ ಸ್ಥಾಪನೆಗಾಗಿ ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 1756

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಂ.ಎಸ್. ನಟರಾಜಮೂರ್ತಿ ನಿವೃತ್ತಿ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿ ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 297 ಎಸ್‌ಇಎನ್ 2006, ದಿನಾಂಕ 8.3.2007.
2. ವಿಚಾರಣಾಧಿಕಾರಿಯವರ ವರದಿ ದಿನಾಂಕ 23.7.2007.

**ಪ್ರಸ್ತಾವನೆ:**

ಶ್ರೀ ನಾಗರಾಜ್, ಕೆ.ಎ.ಎಸ್. ಕಿರಿಯ ಶ್ರೇಣಿ ಅಧಿಕಾರಿ ಇವರು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 97 ಆಸೇವ 2006, ದಿನಾಂಕ 20-6-2006ರಲ್ಲಿ ಉಪ ವಿಭಾಗಾಧಿಕಾರಿ ರಾಯಚೂರು ಉಪ ವಿಭಾಗ, ರಾಯಚೂರು ಹುದ್ದೆಗೆ ಹಾಜರಾಗದೇ ಇರುವ ಆರೋಪಕ್ಕಾಗಿ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ 8-3-2007ರ ಆದೇಶದಲ್ಲಿ ಶ್ರೀ ಎಂ.ಎಸ್. ನಟರಾಜಮೂರ್ತಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ 23-7-2007ರಂದು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಬೇಕಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 70 ಕೆಇವಿ 2007, ಬೆಂಗಳೂರು ದಿನಾಂಕ: 27ನೇ ಸೆಪ್ಟೆಂಬರ್,. 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಎಂ.ಎಸ್. ನಟರಾಜಮೂರ್ತಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005, ದಿನಾಂಕ 23-8-2005 ರನ್ವಯ ರೂ.6,000,00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ 4-3-2002 ರನ್ವಯ ರೂ. 1000.00 (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ವಾಹನ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ '2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರ ಸಚಿವಾಲಯ-051 ಸಾಮಾನ್ಯ ವೆಚ್ಚಗಳು' ರಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

ಪಿ.ಆರ್. 1757

**ವಿಷಯ:** ಶ್ರೀ ಇ. ರಾಧಾಕೃಷ್ಣ, ಕೆಎಎಸ್ ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ: ಸಿಆಸುಇ 62 ಎಸ್‌ಇಎನ್ 2006, ದಿನಾಂಕ 17.4.2007.
2. ಶ್ರೀ ಇ. ರಾಧಾಕೃಷ್ಣ ಇವರ ದಿನಾಂಕ 19-6-2007ರ ಮನವಿ.

**ಪ್ರಸ್ತಾವನೆ:**

ಶ್ರೀ ಇ. ರಾಧಾಕೃಷ್ಣ, ಕೆಎಎಸ್ ಅಧಿಕಾರಿ ಇವರಿಗೆ ಬೆಂಗಳೂರಿನ ರಾಷ್ಟ್ರೀಯ ಕ್ರೀಡಾ ವಸತಿ ಗ್ರಾಮ, ಕೋರಮಂಗಲ, ಬೆಂಗಳೂರು ಇಲ್ಲಿ 12 ತಿಂಗಳ ಅವಧಿಗೆ ಸರ್ಕಾರಿ ವಸತಿ ಗೃಹ ಹಂಚಿಕೆಯಾಗಿದ್ದು, ಅವರು 12 ತಿಂಗಳು ಪೂರ್ಣಗೊಂಡ ನಂತರವೂ ಅನುಮತಿ ಪಡೆಯದೇ ವಸತಿ ಗೃಹದಲ್ಲಿ ಮುಂದುವರಿದಿರುವ ಹಾಗೂ ದಿನಾಂಕ 25-8-2000ದಂದು ಗುಲ್ಬರ್ಗಾಕ್ಕೆ ವರ್ಗಾವಣೆ ಹೊಂದಿದ್ದರೂ ಸಹ ಅವರು ಸದರಿ ವಸತಿ ಗೃಹವನ್ನು ಖಾಲಿ ಮಾಡದ ಆರೋಪಕ್ಕೆ ಸಂಬಂಧಿಸಿದಂತೆ ಅವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸಲು ಉದ್ದೇಶಿಸಿ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ನೋಟೀಸ್‌ನೊಂದಿಗೆ ಆರೋಪ ಪಟ್ಟಿಯನ್ನು ಜಾರಿಗೊಳಿಸುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆರಂಭಿಸಲಾಯಿತು.

ಸದರಿ ಅಧಿಕಾರಿಯು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಮನವಿಯಲ್ಲಿ ಈ ಸಂಬಂಧವಾಗಿ ಲಿಖಿತ ಹೇಳಿಕೆಯನ್ನು ನೀಡಲು ತಮಗೆ ದಿನಾಂಕ 15-7-2007 ರವರೆಗೆ ಕಾಲಾವಕಾಶ ನೀಡುವಂತೆ ಕೋರಿರುತ್ತಾರೆ. ನಿಗದಿತ ಅವಧಿ ಮುಕ್ತಾಯಗೊಂಡಿದ್ದರೂ ಅವರಿಂದ ಯಾವುದೇ ಹೇಳಿಕೆ ಸ್ವೀಕೃತವಾಗದ ಕಾರಣ ಸದರಿ ಅಧಿಕಾರಿಯ ಮೇಲೆ ಹೊರಿಸಲಾದ

ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನು ಹಾಗೂ ಮಂಡನಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 62 ಎಸ್‌ಇಎನ್ 2006, ಬೆಂಗಳೂರು ದಿನಾಂಕ: 28ನೇ ಸೆಪ್ಟೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಇ. ರಾಧಾಕೃಷ್ಣ, ಕೆಎಎಸ್ ಅಧಿಕಾರಿ ಇವರ ಮೇಲೆ ಹೊರಿಸಲಾದ ಆರೋಪ ಕುರಿತು ವಿಚಾರಣೆ ನಡೆಸಲು ಸರ್ಕಾರವು ಶ್ರೀ ಬಿ. ರಂಗಸ್ವಾಮಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005, ದಿನಾಂಕ 23-8-2005ರನ್ವಯ ರೂ. 6,000.00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ 4-3-2002 ರಂತೆ ರೂ. 1,000.00 (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕಾರ್ಯಪಾಲಕ ಅಭಿಯಂತರರು, ನಂ. 2, ಕಟ್ಟಡಗಳ ವಿಭಾಗ, ಲೋಕೋಪಯೋಗಿ ಇಲಾಖೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣಾಧಿಕಾರಿಗಳಿಗೆ ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಲೋಕೋಪಯೋಗಿ ಇಲಾಖೆಯು ಕ್ರಮ ಕೈಗೊಳ್ಳುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

ಪಿ.ಆರ್. 1758

## Forest, Ecology and Environment Secretariat

**Sub:** Diversion of 34.40 ha. of forest land in Kallahalli village of Hospet taluk, Bellary for extraction of iron ore in favour of Shri K.R. Kaviraj, Hospet.

**Read:**
1) Letter No. A5(1) MNG.CR.43/06-07, dated 28-6-2006 of the Principal Chief Conservator of Forests, Bangalore.
2) State Government letter No. FEE 97 FFM 2006, dated 2-2-2007.
3) Government of India Ministry of Environment and Forests, Regional Office, South Zone, Bangalore letter No. 4-KRC 287/2007-BAN/598, dated 10th August 2007.
4) Letter No. A5(1) MNG.CR.43/06-07, dated 4-9-2007 of the Principal Chief Conservator of Forests, Bangalore.
5) State Government letter No. FEE 97 FFM 2006, dated 12-9-2007.
6) Government of India Ministry of Environment and Forests, Regional Office, South Zone, Bangalore letter No. 4-KRC 287/2007-BAN/807, dated 17th September, 2007.

**Preamble:**

The Principal Chief Conservator of Forests had sent proposal vide his letter dated 28-6-2006 read at (1) above for diversion of 34.40 ha. of forest land in Kallahalli village of Hospet taluk, Bellary for extraction of iron ore in favour of Shri K.R. Kaviraj, Hospet, for a period of 20 years co-terminus with the lease granted under MMDR Act, 1957, subject to certain conditions.

The proposal of the Principal Chief Conservator of Forest was recommended to Government of India, Ministry of Environment and Forests, Regional Office, South Zone, Bangalore vide State Government letter dated 2-2-2007 read at (2) above seeking prior approval of Government of India under section 2 of The Forest (Conservation) Act, 1980.

After careful consideration of the proposal of the State Government, Government of India vide its letter dated 10th August, 2007 read at (3) above has agreed in-principle (Stage-I) subject to the fulfillment of certain conditions.

In compliance of the conditions stipulated by Government of India vide its letter dated 10th August 2007 the Principal Chief Conservator of Forests vide his letter dated 4-9-2007 read at (4) above has sent his compliance report. This compliance report was forwarded to Government of India vide State Government letter dated 12-9-2007 read at (5) above.

Government of India vide its letter dated 17th September 2007 read at (6) above has conveyed its final approval (State-II) under Section 2 of The Forest (Conservation) Act, 1980 for diversion of 34.40 ha. of forest land in Kallahalli village of Hospet taluk, Bellary for extraction of iron ore in favour of Shri K.R. Kaviraj, Hospet, for a period of 20 years co-terminus with the lease granted under MMDR Act, 1957, subject to certain conditions. Hence the order.

**Government Order No. FEE 97 FFM 2006, Bangalore, Dated 25th September, 2007**

In the circumstances explained above, Government is pleased to accord sanction under Section 2 of the Forest (Conservation) Act, 1980 for diversion of 34.40 ha. of forest land in Kallahalli village of Hospet taluk, Bellary for extraction of iron ore in favour of Shri K.R. Kaviraj, Hospet, for a period of 20 years co-terminus with the lease granted under MMDR Act, 1957, subject to the following conditions.

1. Legal status of forest land shall remain unchanged.
2. The demarcation of the proposed forest area shall be carried out by erecting cement concrete pillars duly numbered at an interval of 20 meters at the cost of user agency.
3. Compensatory afforestation shall be raised over identified equivalent non-forest land (34.40 ha.) at Sy.No. 12 of Bukkalarahalli village, Challakere taluk of Chitradurga district, at the cost of user agency. The State Government shall obtain prior permission of Central Government for change of location and schedule of CA if any.
4. Non-forest land for CA shall be notified by the State Government as RF/PF under Indian Forest Act, 1927 or the State Forest Act within a period of 6 months and Nodal Officer (FC) shall report the compliance within 6 months.
5. The State Government shall raise and maintain a safety zone and will also raise and maintain the plantation over an area, one and half tiems of the extent of the safety zone, of the degraded forest land, at the project cost.
6. The funds received from the user agency towards NPV under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003 immediately under intimation to Government of India.
7. No new construction of building for any purpose will be taken up in the forest area diverted for the project.
8. The mining activity in the forest area shall be carried out as per the approved mining plan from the IBM.
9. The user agency shall obtain Environmental Clearance under the Environment (Protection) Act, 1986.
10. The consent of State Pollution Control Board shall be obtained under Air and Water Act before the commencement of mining operation and it shall be renewed every year.
11. Trees shall be felled only when it becomes necessary and in the supervision of State Forest Department.
12. No labour camps shall be established on the leased/diverted forest land.
13. Sufficient firewood shall be provided by the user agency to the labourers at the project cost after purchase from the State Forest department / Forest Development Corporation.
14. Reclamation plan shall be executed by the user agency from the very first year of mining and an annual report shall be sent to the Nodal Officer and the Regional Office, Bangalore.
15. The user agency shall project the top soil at the project cost.
16. The user agency shall ensure that there should be no damage to the wildlife.
17. The forest land shall not be used for any purpose other than that specified in the proposal
18. The total forest area utilized for the project shall not exceed 34.40 ha. In case the land is not used for the stipulated purpose, then the area will be resumed by the Forest Department.

19. The forest land as scheduled is diverted for mining purpose under Forest (Conservation) Act 1980 for 20 years co-terminus with lease period of MMDR Act 1957.
20. The lessee shall pay usual lease rent and other charges as prescribed by the Government from time to time.
21. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.
22. The lessee shall undertake the afforestation measures in the vacant area of the lease.
23. The lessee shall carryout soil and water conservation measures and other necessary measures as advised by the Forest Department from time to time.
24. The lessee shall undertake to protect rigidly the leased area and forest area surrounding the area upto one Km. from the leased area.
25. The lessee shall not cut any trees without prior permission of the Forest Department and all produce of permitted felling shall be handed over to Forest Department under cover of receipt.
26. The lessee shall abide by all the conditions prescribed by Government of India and Government of Karnataka.
27. The lessee shall execute an agreement with the Forest Department binding himself to abide by all usual conditions and terms as per orders of the Government as well as Principal Chief Conservator of Forests.
28. The lessee shall taken-up the planting work on the static dumps during the advance mining operations.
29. In case of violation of agreement conditions, the State Government (Department of Forests, Ecology and Environment) shall have right to suspend the mining activities.
30. The lessee shall reclaim the area 34.40 ha. before handing over to Forest Department.
31. The lessee has to pay extraction cost to Forest Department for felling of trees in the fresh leased area.
32. The lessee has to pay all the dues against him before the end of lease period including reclamation and rehabilitation charges.
33. The user agency shall submit the reclamation and rehabilitation plan after in principal approval, if not submitted so with a undertaking that amount fixed by Forest Department / Director, Department of Mines and Geology / IBM shall be deposited to Forest Department on demand. Review for rehabilitation and reclamation will be carried out on 5th, 10th, 15th and 19th year if found unsatisfactory then the permission granted under Forest (Conservation) Act 1980 will be revoked by the Government of Karnataka.
34. The lessee has to pay the Net Present Value (NPV) cost fixed by the Government Notification No. FEE 247 FGL 2002, dated 17-1-2004.
35. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By Order and in the name of the Governor of Karnataka,

**P.R. KALAVATHI**

Under Secretary to Government,

Forest, Ecology and Environment Department.

P.R.1760

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಉಡುಪಿ ಜಿಲ್ಲೆಯಲ್ಲಿರುವ ಎಂಟು ಗ್ರಾಮೀಣ ಆಯುರ್ವೇದ ಚಿಕಿತ್ಸಾಲಯಗಳನ್ನು (ಎಸ್.ಎಂ.ಪಿ.) ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನಾಗಿ ಪರಿವರ್ತಿಸುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಆಯುಷ್/21/ಬಿಯುಡಿ(4)/2006-07, ದಿನಾಂಕ 29-6-2006.

2. ಸರ್ಕಾರದ ಪತ್ರ ಸಂಖ್ಯೆ: ಆಕುಕ 402 ಪಿಐಎಂ 1983, ದಿನಾಂಕ 2.7.1987.

3. ದಿನಾಂಕ 16–4–2007ರಂದು ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಹೊಸ ಯೋಜನೆಗಳ ಬಗ್ಗೆ ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳು.
4. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/13/ ಬಿಯುಡಿ (2)/2007–08, ದಿನಾಂಕ 25–5–2007.

ಪ್ರಸ್ತಾವನೆ:

ಮೇಲೆ ಓದಲಾದ ಕ್ರ.ಸಂ. (1)ರ ಪತ್ರದಲ್ಲಿ, ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರು ಉಡುಪಿ ಜಿಲ್ಲೆಯಲ್ಲಿ ಈ ಕೆಳಗಿನ 08 ಗ್ರಾಮೀಣ ಆಯುರ್ವೇದ ಚಿಕಿತ್ಸಾಲಯಗಳು (ಎಸ್.ಎಂ.ಪಿ.) ಕಾರ್ಯನಿರ್ವಹಿಸುತ್ತಿದ್ದವು ಎಂದು ತಿಳಿಸಿದ್ದಾರೆ.

| ಎಸ್.ಎಂ.ಪಿ. ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ತಾಲ್ಲೂಕು |
|---|---|
| ಕುರ್ಕಾಲು | ಉಡುಪಿ |
| ಶಿರೂರು | ಉಡುಪಿ |
| ಗುಲ್ವಾಡಿ | ಕುಂದಾಪುರ |
| ಕಾಳಾವರ | ಕುಂದಾಪುರ |
| ಕಾಲ್ತೋಡು | ಕುಂದಾಪುರ |
| ಬೆಲ್ಯಾಳ | ಕುಂದಾಪುರ |
| ಸೋಮೇಶ್ವರ | ಕಾರ್ಕಳ. |
| ಕಾಂತಾವರ | ಕಾರ್ಕಳ |

ಸದರಿ ಗ್ರಾಮೀಣ ಆಯುರ್ವೇದ ಚಿಕಿತ್ಸಾಲಯಗಳಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರ.ಸಂ. (2)ರ ಪತ್ರದಲ್ಲಿ ಈ ಕೆಳಕಂಡಂತೆ ಸೂಚನೆ ನೀಡಲಾಗಿತ್ತು.

1. ಗ್ರಾಮೀಣ ಆಯುರ್ವೇದ ಚಿಕಿತ್ಸಾಲಯದಲ್ಲಿ ಈಗಿದ್ದ ವೈದ್ಯರ ಖಾಲಿಯಿದ್ದ : ಖಾಲಿಯಾಗುವ ಸ್ಥಳದಲ್ಲಿ ಹೊಸಬರನ್ನು ನೇಮಿಸಕೂಡದು.
2. ಮತ್ತು ದಿನಾಂಕ 1–4–1987ರಂದು 58 ವರ್ಷಗಳು ಮೀರಿದವರನ್ನು ನಿವೃತ್ತಿಗೊಳಿಸುವುದು.

ಮೇಲಿನ ಗ್ರಾಮೀಣ ಆಯುರ್ವೇದ ಚಿಕಿತ್ಸಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ವೈದ್ಯರುಗಳು ನಿವೃತ್ತಿಯಾಗಿದ್ದರಿಂದ ಮತ್ತು ಸದರಿ ಚಿಕಿತ್ಸಾಲಯಗಳು ಮುಚ್ಚಲ್ಪಡುವುದರಿಂದ, ಸಾರ್ವಜನಿಕರಿಗೆ ಈಗ ಲಭ್ಯವಿರುವ ಆರೋಗ್ಯ ಸೇವಾ ಸೌಲಭ್ಯಗಳನ್ನು ಇಲ್ಲದಂತೆ ಮಾಡುವುದರ ಬದಲಾಗಿ ಈಗಿರುವ ಎಂಟು ಗ್ರಾಮೀಣ ಆಯುರ್ವೇದ ಚಿಕಿತ್ಸಾಲಯಗಳನ್ನು ಯೋಜನೇತರ ಅಡಿ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನಾಗಿ ಪರಿವರ್ತಿಸಲು ಉಡುಪಿ ಜಿಲ್ಲಾ ಪಂಚಾಯತ್ ಸಹ ಅನುಮೋದನೆ ನೀಡಿರುವುದರಿಂದ, ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ 2.7.1987ರ ಸರ್ಕಾರದ ಪತ್ರವನ್ನು ರದ್ದುಪಡಿಸಿ ಉಡುಪಿ ಜಿಲ್ಲೆಯಲ್ಲಿರುವ ಗ್ರಾಮೀಣ ಆಯುರ್ವೇದ ಚಿಕಿತ್ಸಾಲಯಗಳನ್ನು ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳಾಗಿ ಪರಿವರ್ತಿಸಿ, ತಲಾ ಒಂದು ವೈದ್ಯರು ದರ್ಜೆ–2 ಮತ್ತು ಗ್ರೂಪ್–ಡಿ ಹುದ್ದೆಯನ್ನು ಅಸ್ತಿತ್ವದಲ್ಲಿ ಮುಂದುವರೆಸಿ ಇವುಗಳಿಗೆ ಸಂಬಂಧಿಸಿದ ಔಷಧಿ, ಕಛೇರಿ, ಸಿಬ್ಬಂದಿ, ವೇತನದ ವೆಚ್ಚಗಳನ್ನು ಯೋಜನೇತರ ಲೆಕ್ಕ ಶೀರ್ಷಿಕೆ 2210–04–101–1–77ರಲ್ಲಿ ಭರಿಸಲು ಅನುಮತಿ ನೀಡುವಂತೆ ಹಾಗೂ ಈ ಚಿಕಿತ್ಸಾಲಯಗಳ ತಲಾ 02 ಹುದ್ದೆಗಳ ಅಸ್ತಿತ್ವವನ್ನು ಮುಂದುವರೆಸಿ, ಹುದ್ದೆಗಳನ್ನು ಸೃಜಿಸಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರ.ಸಂ. (3)ರ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಯಲ್ಲಿ, ಉಡುಪಿ ಜಿಲ್ಲೆಯ ಎಂಟು ಎಸ್.ಎಂ.ಪಿ. ಕೇಂದ್ರಗಳನ್ನು ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನಾಗಿ ಪರಿವರ್ತಿಸಲು ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು, ಶಾಸಕರು, ಜಿಲ್ಲಾ ಪಂಚಾಯತ್ ಮತ್ತು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಪ್ರಸ್ತಾಪಿಸಿದ್ದನ್ನು ಸಭೆಯಲ್ಲಿ ಆಯುಷ್ ಇಲಾಖೆಯ ನಿರ್ದೇಶಕರು ವಿವರಿಸಿದ್ದು, ಈ ವಿಷಯವು ಜಿಲ್ಲಾ ಪಂಚಾಯತ್ ಯೋಜನೆಯ ವ್ಯಾಪ್ತಿಯಲ್ಲಿ ಬರುವುದರಿಂದ ಹಾಗೂ ಪ್ರಸ್ತಾವನೆ ಪರಿಗಣಿಸಲು ರೂ. 11.44 ಲಕ್ಷಗಳು ಮಾತ್ರ ಬೇಕಾಗಿದ್ದು, ಪ್ರಸ್ತುತ ಆಯವ್ಯಯದಲ್ಲಿ ಒದಗಿಸಿರುವ ಅನುದಾನ ಮಿತಿಗೊಳಪಟ್ಟು ಅನುಮೋದಿಸಿದೆ.

ಮೇಲೆ ಓದಲಾದ ಕ್ರ.ಸಂ. (4)ರ ಪತ್ರದಲ್ಲಿ, ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರು ಈ ರೀತಿ ಎಸ್.ಎಂ.ಪಿ. ಕೇಂದ್ರಗಳನ್ನು ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನಾಗಿ ಪರಿವರ್ತಿಸಿರುವುದರಿಂದ, ಹುದ್ದೆಗಳನ್ನು ಸೃಜಿಸಬೇಕಾಗಿದ್ದು ಈ ಕೆಳಗಿನಂತೆ ವೆಚ್ಚವಾಗುತ್ತದೆ ಎಂದು ತಿಳಿಸಿದ್ದಾರೆ.

| ಕ್ರ. ಸಂ. | ಹುದ್ದೆಗಳು ಮತ್ತು ಇತರೆ ಸೌಲಭ್ಯಗಳು | ಅಂದಾಜು ವೆಚ್ಚ |
|---|---|---|
| 1. | 8 ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳಲ್ಲಿ ತಲಾ 1 ರಂತೆ 8 ವೈದ್ಯರು ದರ್ಜೆ–2 ಹುದ್ದೆಗಳು | 12.25 ಲಕ್ಷಗಳು |
| 2. | 8 ಗ್ರೂಪ್–ಡಿ ನೌಕರರ ಹುದ್ದೆಗಳು | 05.47 ಲಕ್ಷಗಳು |
| 3. | ಔಷಧ ವೆಚ್ಚ | 02.88 ಲಕ್ಷಗಳು |
| 4. | ಇತರೆ ಸಾಮಾನ್ಯ ವೆಚ್ಚ | 00.80 ಲಕ್ಷಗಳು |
| | ಒಟ್ಟು | **21.40 ಲಕ್ಷಗಳು** |

ಈ ವೆಚ್ಚವು ವೇತನ ಶ್ರೇಣಿ ಪರಿಷ್ಕರಣೆಯಿಂದ ಈ ಹಿಂದೆ ಅಧಿಕಾರಯುಕ್ತ ಸಮಿತಿಗೆ ನೀಡಿರುವ ವೆಚ್ಚಕ್ಕಿಂತ ಹೆಚ್ಚಾಗಿದ್ದು, ಈ ಹುದ್ದೆಗಳನ್ನು ಭರ್ತಿ ಮಾಡಲು ಕಾಲಾವಕಾಶ ಬೇಕಾಗಿರುವುದರಿಂದ, ಈ ವರ್ಷ ಅಧಿಕಾರಯುಕ್ತ ಸಮಿತಿಗೆ ತೋರಿಸಿರುವ ವೆಚ್ಚ ರೂ. 11.84 ಲಕ್ಷಗಳ ಒಳಗೆ ವೆಚ್ಚವನ್ನು ನಿಯಂತ್ರಿಸಬಹುದೆಂದು ನಿರ್ದೇಶಕರು ತಿಳಿಸಿದ್ದಾರೆ. ಮತ್ತು ಈ ಸಾಲಿನಲ್ಲಿ ಯಾವುದೇ ಹೆಚ್ಚುವರಿ ಆಯವ್ಯಯ ಒದಗಿಸಬೇಕಾದ ಆರ್ಥಿಕ ಹೊರೆ ಇರುವುದಿಲ್ಲ. ಆದುದರಿಂದ, ಉಡುಪಿ ಜಿಲ್ಲೆಯ 08 ಎಸ್.ಎಂ.ಪಿ ಕೇಂದ್ರಗಳನ್ನು ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನಾಗಿ ಪರಿವರ್ತಿಸಿ ಹುದ್ದೆಗಳ ಸೃಜನೆಗೆ ಮಂಜೂರಾತಿಯನ್ನು ನೀಡಬೇಕೆಂದು ಕೋರಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 131 ಪಿಐಎಂ 2006, ಬೆಂಗಳೂರು, ದಿನಾಂಕ 19.9.2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಗಣಿಸಿ, ಸಾರ್ವಜನಿಕರ ಆರೋಗ್ಯ ಸೇವಾ ದೃಷ್ಟಿಯಿಂದ ಉಡುಪಿ ಜಿಲ್ಲೆಯಲ್ಲಿ ಪ್ರಸ್ತಾವನೆಯಲ್ಲಿ ನಮೂದಿಸಲಾಗಿರುವ 08 ಎಸ್.ಎಂ.ಪಿ. ಕೇಂದ್ರಗಳನ್ನು ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನಾಗಿ ಪರಿವರ್ತಿಸಿ, ಈ ಕೆಳಗಿನ ಷರತ್ತಿಗೆ ಒಳಪಟ್ಟು ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

| ಕ್ರ. ಸಂ. | ಚಿಕಿತ್ಸಾಲಯಗಳು | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ (ರೂ.ಗಳಲ್ಲಿ) |
|---|---|---|---|---|
| 1. | 8 ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳು (ತಲಾ 1 ಹುದ್ದೆ) | ವೈದ್ಯರು ದರ್ಜೆ–2 (ಆಯುರ್ವೇದ) | 8 | 11400–21600 |
| 2. | 8 ಕೇಂದ್ರಗಳಿಗೆ ಗ್ರೂಪ್ ಹುದ್ದೆಗಳು (ತಲಾ 1 ಹುದ್ದೆ) | ಗ್ರೂಪ್–ಡಿ | 8 | 4800–7275 |

1) ವೈದ್ಯರು ದರ್ಜೆ–2 ಹುದ್ದೆಗಳನ್ನು ಕರ್ನಾಟಕ ಲೋಕಸೇವಾ ಆಯೋಗದಿಂದ ನೇರ ನೇಮಕಾತಿಯ ಮೂಲಕ ಭರ್ತಿ ಮಾಡತಕ್ಕದ್ದು.

2) ಗ್ರೂಪ್–ಡಿ ಹುದ್ದೆಗಳನ್ನು ಹೊರ ಗುತ್ತಿಗೆ (Outsourcers) ಮೂಲಕ ನೇಮಕ ಮಾಡಿಕೊಳ್ಳುವುದು.

3) ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2210–04–101–1–77 ಯೋಜನೇತರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 16–4–2007 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ಅನುಮೋದನೆಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 1761

**ವಿಷಯ:** ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ನೇನೆಕಟ್ಟೆ ಮತ್ತು ಕಡಸೋಗೆ ಗ್ರಾಮಗಳಲ್ಲಿರುವ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನು ಸದರಿ ತಾಲ್ಲೂಕಿನ ಚಿಕ್ಕಾಟಿ ಮತ್ತು ರಾಘವಪುರ ಗ್ರಾಮಗಳಿಗೆ ಸಿಬ್ಬಂದಿ ಸಹಿತ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಅಭಿವೃದ್ಧಿ/57/2006–07, ದಿನಾಂಕ 25–4–2007.

2. ಸಹ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಹೆಚ್‌ಎಸ್‌ಪಿ(1)/119/2006–07, ದಿನಾಂಕ 25–5–2007.

3. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/28/ಬಿಯುಡಿ (2)/2007–08, ದಿನಾಂಕ 18–7–2007 ಮತ್ತು 25–8–2007.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಮತ್ತು ಸಹ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರುಗಳ ಮೇಲೆ ಓದಲಾದ ಕ್ರ.ಸಂ. (1) ಮತ್ತು (2)ರ ಪತ್ರಗಳಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಆಕುಕ 609 ಸಿಜಿಎಂ 2006, ದಿನಾಂಕ 8.2.2007ರಲ್ಲಿ ಗುಂಡ್ಲುಪೇಟೆ ತಾಲ್ಲೂಕು ಆಸ್ಪತ್ರೆಯಲ್ಲಿ ವಿಲೀನಗೊಂಡಿರುವ ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಗುಂಡ್ಲುಪೇಟೆ ತಾಲ್ಲೂಕಿನ ನೇನೆಕಟ್ಟೆ ಗ್ರಾಮಕ್ಕೆ ಹಾಗೂ ಚಾಮರಾಜನಗರ ಜಿಲ್ಲಾ ಆಸ್ಪತ್ರೆಗೆ ಹೊಂದಿಕೊಂಡಂತಿರುವ ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಗುಂಡ್ಲುಪೇಟೆ ತಾಲ್ಲೂಕಿನ ಕಡಸೋಗೆ ಗ್ರಾಮಕ್ಕೆ ಸ್ಥಳಾಂತರಿಸಲು ಆದೇಶ ನೀಡಲಾಗಿರುವುದರಿಂದ, ಸದರಿ

ನೇನೆಕಟ್ಟೆ ಹಾಗೂ ಕಡಸೋಗೆ ಗ್ರಾಮಗಳಲ್ಲಿ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನು ಕ್ರಮವಾಗಿ ಗುಂಡ್ಲುಪೇಟೆ ತಾಲ್ಲೂಕಿನ ರಾಘವಪುರ ಹಾಗೂ ಚಿಕ್ಕಾಟಿ ಗ್ರಾಮಗಳಿಗೆ ಸ್ಥಳಾಂತರಿಸಲು ಅನುಮತಿ ಕೋರಿರುತ್ತಾರೆ.

ಪ್ರಸ್ತುತ ನೇನೆಕಟ್ಟೆ ಮತ್ತು ಕಡಸೋಗೆ ಗ್ರಾಮಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನು ರಾಘವಪುರ ಮತ್ತು ಚಿಕ್ಕಾಟಿ ಗ್ರಾಮಗಳಿಗೆ ಸ್ಥಳಾಂತರಿಸಲು ಜಿಲ್ಲಾ ಪಂಚಾಯತ್‌ನ ಆರೋಗ್ಯ ಮತ್ತು ಶಿಕ್ಷಣ ಸ್ಥಾಯಿ ಸಮಿತಿಯ ಅನುಮೋದನೆ ಅವಶ್ಯವಾಗಿದ್ದು, ಸದರಿ ಪ್ರಸ್ತಾವನೆಗೆ ಸದರಿಯವರ ಅನುಮೋದನೆ ದೊರೆತಿರುವುದಿಲ್ಲ. ಆದರೂ, ರಾಘವಪುರ ಮತ್ತು ಚಿಕ್ಕಾಟಿ ಗ್ರಾಮಗಳಲ್ಲಿ ಯಾವುದೇ ಆರೋಗ್ಯ ಕೇಂದ್ರ ಇಲ್ಲದೇ ಇರುವುದರಿಂದ, ಸಾರ್ವಜನಿಕ ಹಿತದೃಷ್ಟಿಯಿಂದ ಚಾಮರಾಜನಗರ ಜಿಲ್ಲೆ, ಗುಂಡ್ಲುಪೇಟೆ ತಾಲ್ಲೂಕಿನ ನೇನೆಕಟ್ಟೆ ಮತ್ತು ಕಡಸೋಗೆ ಗ್ರಾಮಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನು ಕೆಳಕಂಡ ಷರತ್ತಿಗೆ ಒಳಪಟ್ಟು ಕ್ರಮವಾಗಿ ರಾಘವಪುರ ಮತ್ತು ಚಿಕ್ಕಾಟಿ ಗ್ರಾಮಗಳಿಗೆ ಸ್ಥಳಾಂತರಿಸುವಂತೆ ಕೋರಿರುತ್ತಾರೆ.

1) ಸದರಿ ಸ್ಥಳಾಂತರ ಕುರಿತು ಚಾಮರಾಜನಗರ ಜಿಲ್ಲಾ ಪಂಚಾಯತ್‌ನ ಆರೋಗ್ಯ ಮತ್ತು ಶಿಕ್ಷಣ ಸ್ಥಾಯಿ ಸಮಿತಿಯ ಘಟನೋತ್ತರ ಅನುಮತಿ ಪಡೆಯುವುದು.
2) ಸದರಿ ಸ್ಥಳಾಂತರಗೊಂಡ ಆಯುರ್ವೇದ ಚಿಕಿತ್ಸಾಲಯಗಳ ಕಟ್ಟಡ ನಿರ್ಮಾಣಕ್ಕೆ ಅಗತ್ಯವಿರುವ ನಿವೇಶನವನ್ನು ಜಿಲ್ಲಾ ಪಂಚಾಯತ್ ಗ್ರಾಮಸ್ಥರಿಂದ ಉಚಿತವಾಗಿ ಪಡೆದು ನೀಡತಕ್ಕದ್ದು. ಮತ್ತು
3) ಆಯುರ್ವೇದ ಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಅಗತ್ಯವಿರುವ ಕಟ್ಟಡವನ್ನು ಸಂಬಂಧಿಸಿದ ಗ್ರಾಮಗಳ ಗ್ರಾಮಸ್ಥರು ಉಚಿತವಾಗಿ ನೀಡತಕ್ಕದ್ದು.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 285 ಪಿಐಎಂ 2007, ಬೆಂಗಳೂರು, ದಿನಾಂಕ 20–9–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಚಾಮರಾಜನಗರ ಜಿಲ್ಲೆ, ಗುಂಡ್ಲುಪೇಟೆ ತಾಲ್ಲೂಕಿನ ನೇನೆಕಟ್ಟೆ ಮತ್ತು ಕಡಸೋಗೆ ಗ್ರಾಮಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನು ಮೇಲೆ ತಿಳಿಸಿರುವ ಷರತ್ತುಗಳಿಗೊಳಪಟ್ಟು ಕ್ರಮವಾಗಿ ಕುಂದಕೆರೆ ಮತ್ತು ರಾಘವಪುರ ಗ್ರಾಮಗಳಿಗೆ ಸ್ಥಳಾಂತರಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1762

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪಂಪಣ್ಣ, ಎ.ಎಸ್.ಐ., ಇಡಪನೂರು ಪೊಲೀಸ್ ಠಾಣೆ ರಾಯಚೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿಗಳು ರಾಯಚೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ/3/ಇವಿ/7/04, ದಿನಾಂಕ 21.3.2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/117/ಈವ 2005, ದಿನಾಂಕ 12–1–2006.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 5.11.2004 .
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಅಪೀಲು 2/105/2006–07, ದಿನಾಂಕ 1–2–2007.

**ಪ್ರಸ್ತಾವನೆ:**

ಶ್ರೀ ಪಂಪಣ್ಣ, ಎ.ಎಸ್.ಐ., ಇಡಪನೂರು ಪೊಲೀಸ್ ಠಾಣೆ ರಾಯಚೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:–**

ಶ್ರೀ ಪಂಪಣ್ಣ, ಎ.ಎಸ್.ಐ., ಇಡಪನೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ 5–9–2004ರಂದು ಯು.ಡಿ.ಆರ್. ನಂ. 7/04, ಕಲಂ 174(ಸಿ) ಸಿ.ಆರ್.ಪಿ.ಸಿ. ಪ್ರಕರಣವು ವರದಿಯಾಗಿದ್ದು, ಶವ ಪಂಚನಾಮೆ ಕಾಲಕ್ಕೆ ಹಾಜರ ಇರುವ ಶವದ ರಕ್ತ ಸಂಬಂಧಿಕರ ಹಾಗೂ ಇತರರ ಹೇಳಿಕೆಗಳು ಪಡೆಯದೆ ಮೃತನ ಪಿ.ಎಂ.ಇ. ವರದಿ ಪಡೆಯದೆ ಸಿ.ಡಿ.ಗಳನ್ನು ಬರೆಯದೆ, ಸಮರ್ಪಕವಾದ ತನಿಖೆಯನ್ನು ಕೈಗೊಳ್ಳದೆ ಇರುವುದು ಕಂಡುಬಂದಿದ್ದರಿಂದ ಡಿ.ಎಸ್.ಪಿ. ರಾಯಚೂರು, ಇವರು ಈ ಬಗ್ಗೆ ಸಮರ್ಪಕವಾದ ವಿವರಣೆ ಸಲ್ಲಿಸದೆ ಕರ್ತವ್ಯದಲ್ಲಿ ನಿರ್ಲಕ್ಷತನ ಹಾಗೂ ಘೋರ ಕರ್ತವ್ಯಲೋಪ ಎಸಗಿರುವಿರೆಂದು ಆರೋಪಿಸಲಾಗಿತ್ತು.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 21–3–2006ರ ಆದೇಶದಲ್ಲಿ ಅರ್ಜಿದಾರರಿಗೆ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಒಂದು ವರ್ಷಕಾಲ ಮುಂದೂಡಿದ ಹಾಗೂ ಅಮಾನತ್ತಿನ ಅವಧಿ ದಿನಾಂಕ 19–11–2004 ರಿಂದ 25–8–2005ರ ವರೆಗಿನ ಅವಧಿಯನ್ನು ಅಮಾನತ್ತಿನ ಅವಧಿ ಎಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ, ಇವರ ಮೇಲ್ಮನವಿಯನ್ನು ಶಿಸ್ತು ಪ್ರಾಧಿಕಾರ ವಿಧಿಸಿದ ಶಿಕ್ಷೆಯನ್ನು ಮಾರ್ಪಡಿಸಿ ಶ್ರೀ ಪಂಪಣ್ಣ, ಎ.ಎಸ್.ಐ., ಇಡಪನೂರು ಪೊಲೀಸ್ ಠಾಣೆ ಇವರ ವಾರ್ಷಿಕ ವೇತನ ಬಡ್ತಿಯ ಎರಡು ಹಂತಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಆದೇಶಿಸಿ ಇಳಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲೆ ಶಿಸ್ತು ಪ್ರಾಧಿಕಾರಿ ವಿಧಿಸಿದ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರ ಮಾರ್ಪಡಿಸಿ ಇನ್ನು ಮುಂದೆ ಹೀಂಗಾಗದಂತೆ ನೋಡಿಕೊಳ್ಳಲು ಒಂದು ಅವಕಾಶ ಕೊಟ್ಟಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸಿದ್ದು, ಅತೀವ ನಿರ್ಲಕ್ಷತೆ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 198 ಪೊಸಿಅ 2007, ಬೆಂಗಳೂರು, ದಿನಾಂಕ 22–9–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಂಪಣ್ಣ, ಎ.ಎಸ್.ಐ., ಇಡಪನೂರು ಪೊಲೀಸ್ ಠಾಣೆ ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1763

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಂ. ಶಾಮೀದ್ ಬಾಷಾ ಪಿ.ಎಸ್.ಐ., ದಾವಣಗೆರೆ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ/5/ಇಪಿ/2/170/2005, ದಿನಾಂಕ 24.1.2005
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 51/ಅಪೀಲು/ಸಿಬ್ಬಂದಿ–2/2005–06, ದಿನಾಂಕ 9–8–2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 8.2.2005
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಅಪೀಲು 2/117/2005.

**ಪ್ರಸ್ತಾವನೆ:**

ಶ್ರೀ ಎಂ. ಶಾಮೀದ್ ಬಾಷಾ ಪಿ.ಎಸ್.ಐ., ದಾವಣಗೆರೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:–**

ನೀವು ದಿನಾಂಕ 20–8–2004 ರಿಂದ 26–9–2004ರವರೆಗೆ ವೈದ್ಯಕೀಯ ಸಲಹೆ ಮೇರೆಗೆ 38 ದಿನಗಳ ಸಿ.ಎಲ್.ಎಫ್.ಪಿ. ರಜೆಯನ್ನು ಮಂಜೂರು ಮಾಡಲು ಕೋರಿ ಅರ್ಜಿ ಸಲ್ಲಿಸಿದ್ದೀರಿ. ನೀವು ದಾವಣಗೆರೆಯ ಸಿ.ಜಿ. ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದಂತೆ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಿದ್ದು, ನೀವು ಕೇಂದ್ರ ಸ್ಥಾನದಲ್ಲಿ ಇದ್ದರೂ ಸಹಾ ನಿಮ್ಮ ಮೇಲಾಧಿಕಾರಿಗಳಿಗೆ ಯಾವುದೇ ಮಾಹಿತಿ ನೀಡದೇ ರಜಾ ಅರ್ಜಿ ಸಲ್ಲಿಸದೇ ದಿನಾಂಕ 20–8–2004 ರಿಂದ 26–9–2004ರ ವರೆಗೆ 38 ದಿನಗಳ ಕಾಲ ಅನಧಿಕೃತವಾಗಿ ಗೈರುಹಾಜರಾಗಿದ್ದು, ಇಲಾಖೆಯಲ್ಲಿ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾದ ನೀವು ಅತೀವ ಕರ್ತವ್ಯ ನಿರ್ಲಕ್ಷತನವನ್ನು ಮತ್ತು ಅಶಿಸ್ತನ್ನು ಪ್ರದರ್ಶಿಸಿದ್ದೀರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 24–1–2005ರ ಆದೇಶದಲ್ಲಿ ಅರ್ಜಿದಾರರನ್ನು ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ

ಮೇಲೆ ಪರಿಣಾಮ ಬೀರದಂತೆ, ಆರು (6) ತಿಂಗಳ ಕಾಲ ಮುಂದೂಡಿ ಹಾಗೂ ಅನಧಿಕೃತವಾಗಿ ಗೈರು ಹಾಜರಾದ 38 ದಿನಗಳ ಅವಧಿಯನ್ನು ಸಂಬಳ ರಹಿತ ರಜೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ, ಇವರ ಮೇಲ್ಮನವಿಯನ್ನು ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 8.2.2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಮೇಲಾಧಿಕಾರಿಗಳ ಪೂರ್ವಾನುಮತಿ ಇಲ್ಲದೆ ಗೈರುಹಾಜರಾಗಿರುವುದು ಕಂಡು ಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇವರು ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 217 ಪೊಸಿಅ 2007, ಬೆಂಗಳೂರು, ದಿನಾಂಕ 21-9-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಶಾಮೀದ್ ಬಾಷಾ ಪಿ.ಎಸ್.ಐ., ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1764

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎನ್. ರಾಜಣ್ಣ, ಪಿ.ಎಸ್.ಐ., ಮಾಸ್ತಿ ಪೊಲೀಸ್ ಠಾಣೆ ಕೋಲಾರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಇವರ ಆದೇಶ ಸಂಖ್ಯೆ: ಸಿಬ್ಬಂದಿ/4/ ಶಿಕ್ಷೆ/69 ದಿನಾಂಕ 3.1.2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 60/ಅಪೀಲು/ಸಿಬ್ಬಂದಿ-2/2005-06, ದಿನಾಂಕ 6-5-2006.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 24.7.2006
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಅಪೀಲು 2/83/2006-07, ದಿನಾಂಕ 21-3-2007.

**ಪ್ರಸ್ತಾವನೆ:**

ಶ್ರೀ ಎನ್. ರಾಜಣ್ಣ ಪಿ.ಎಸ್.ಐ., ಮಾಸ್ತಿ ಪೊಲೀಸ್ ಠಾಣೆ ಕೋಲಾರ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:-**

1. ಡಿ.ಎಸ್.ಪಿ. ರವರು ದಿನಾಂಕ 8-5-2005, 4-5-2005 ಮತ್ತು 4-9-2005ರಂದು ಜ್ಞಾಪನ ನೀಡಿದ್ದರೂ ಸಹ, ಅವರ ಕಛೇರಿಯಿಂದ ಕಳುಹಿಸಿದ ಚೆಕ್ ಮೆಮೊ ಹಾಗೂ ಇತರೆ ಕಾಗದ ಪತ್ರಗಳಿಗೆ ಸಕಾಲದಲ್ಲಿ ಉತ್ತರ ನೀಡದೆ ನಿರ್ಲಕ್ಷತನ ಪ್ರದರ್ಶಿಸಿರುತ್ತೀರಿ.
2. ರಾತ್ರಿ ಗಸ್ತು ಅಧಿಕಾರಿಗಳಿಗೆ ವಾಕಿ-ಟಾಕಿ ಒದಗಿಸದೆ ಇದ್ದ ಬಗ್ಗೆ ಡಿ.ಎಸ್.ಪಿ. ರವರು ದಿನಾಂಕ 8-6-2005ರಂದು ನೀಡಿದ ಜ್ಞಾಪನಕ್ಕೆ ಪಾಲನಾ ವರದಿ ಸಲ್ಲಿಸಿರುವುದಿಲ್ಲ.
3. ಡಿ.ಎಸ್.ಪಿ. ರವರು ದಿನಾಂಕ 3-9-2005ರಂದು ಜ್ಞಾಪನಾ ನೀಡಿ ಚಂದ್ರಗುತ್ತಿ ಹೊರ ಠಾಣೆಗೆ ಸೇರಿದ ಜಾಗಕ್ಕೆ ಸುತ್ತಲೂ ಬೇಲಿ ಹಾಕಿಸಿ ಪಾಲನಾ ವರದಿ ಸಲ್ಲಿಸಲು ಸೂಚಿಸಿದ್ದರೂ ಈ ಬಗ್ಗೆ ಯಾವುದೇ ಕ್ರಮ ಕೈಗೊಂಡಿರುವುದಿಲ್ಲ.
4. ಹೆಚ್ಚುವರಿ ಪೊಲೀಸ್ ಸೂಪರಿಂಟೆಂಡೆಂಟ್ ರವರು ನಡೆಸಿದ ಪರಿವೀಕ್ಷಣೆಗೆ ಪಾಲನಾವರದಿಯನ್ನು ಮೂರು ತಿಂಗಳಾದರೂ ಸಲ್ಲಿಸದೆ, ವಿಳಂಬವಾಗಿ ಸಲ್ಲಿಸಿರುತ್ತೀರಿ ಹಾಗೂ ಈ ಬಗ್ಗೆ ದಿನಾಂಕ 23-9-2005ರಂದು ನೀಡಿದ ಜ್ಞಾಪನಕ್ಕೆ ಪಾಲನಾ ವರದಿ ಸಲ್ಲಿಸಿಲ್ಲ. ಹಾಗೂ ಸೊರಬ ಠಾಣೆಯ ಪೂರ್ಣ ಪ್ರಭಾರ ವಹಿಸಿಕೊಂಡ ಬಗ್ಗೆ, ಪ್ರಭಾರ ಪಟ್ಟಿಯನ್ನು ನಾಲ್ಕು ತಿಂಗಳಾದರೂ ಕಳುಹಿಸದೆ, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ ಪ್ರದರ್ಶಿಸಿರುತ್ತೀರಿ.

5. ಸಿ.ಪಿ.ಐ.ರವರು ದಿನಾಂಕ 28–9–2005ರ 9 ಜ್ಞಾಪನದಲ್ಲಿ ಮೇಲಾಧಿಕಾರಿಗಳು ನೀಡಿದ ಸೂಚನೆ ಮೇರೆಗೆ ಬೆಲೆಬಾಳುವ ಮುದ್ದೆಮಾಲುಗಳನ್ನು ಹಳೆಕಟ್ಟಡದಿಂದ ಹೊಸ ಕಟ್ಟಡಕ್ಕೆ ಸ್ಥಳಾಂತರಿಸುವಂತೆ ಸೂಚಿಸಿದ್ದರೂ, ಈ ಬಗ್ಗೆ ಗಮನ ಹರಿಸಿರುವುದಿಲ್ಲ.
6. ಪ್ರತಿ ತಿಂಗಳ ಕಾರ್ಯಶೀಲನಾ ಪಟ್ಟಿಯನ್ನು 5ನೇ ತಾರೀಖಿನೊಳಗೆ ಸಲ್ಲಿಸಿರುವುದಿಲ್ಲ. ಅಮಾವಾಸ್ಯೆ ಗಸ್ತು ಮತ್ತು ಮೊಹಲ್ಲಾ ಮೀಟಿಂಗ್ ಮುಂತಾದ ವರದಿಗಳನ್ನು ಖುದ್ದು ಪರಿಶೀಲಿಸುವಂತೆ ತಿಳಿಸಿದ್ದರೂ ಮುಖ್ಯ ಪೇದೆಯವರನ್ನು ಕಳುಹಿಸಿ ಮೇಲಾಧಿಕಾರಿಗಳು ನೀಡಿದ ಸೂಚನೆಯನ್ನು ಪಾಲಿಸಿರುವುದಿಲ್ಲ.
7. ಅಪರಾಧ ಮಾಸಿಕ ಸಭೆಯಲ್ಲಿ 10 ಪ್ರಕರಣಗಳಿಗಿಂತ ಮೇಲ್ಪಟ್ಟು ತನಿಖೆಯಲ್ಲಿ ಬಾಕಿ ಇರಬಾರದೆಂದು ತಿಳಿಸಿದ್ದರೂ, 10 ಪ್ರಕರಣಗಳಿಗಿಂತ ಮೇಲ್ಪಟ್ಟು ತನಿಖೆಗೆ ಬಾಕಿ ಇಟ್ಟುಕೊಂಡಿರುತ್ತೀರಿ.
8. ದಿನಾಂಕ 1.10.2005ರಂದು ಶ್ರೀ ಕರಿಯಪ್ಪ ಬಿನ್ ಈರಪ್ಪ ಮಾವಲಿ ಗ್ರಾಮ ಇವರು ನೀಡಿದ ದೂರು ಅರ್ಜಿಯ ಮೇರೆಗೆ ಯಾವುದೇ ಕ್ರಮ ಕೈಗೊಂಡಿರುವುದಿಲ್ಲ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 3–1–2006ರ ಆದೇಶದಲ್ಲಿ ಅರ್ಜಿದಾರರಿಗೆ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ, ಒಂದು ವರ್ಷ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ, ಇವರು ಮೇಲ್ಮನವಿಯನ್ನು ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 16–5–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಮತ್ತು ಉದಾಸೀನತೆ ತೋರಿರುವುದು ವ್ಯಕ್ತವಾಗುತ್ತದೆ. ಆದ್ದರಿಂದ ಪರಿಷ್ಕರಣ ಮೇಲ್ಮನವಿಯನ್ನು ಪರಿಶೀಲಿಸಿ ಪರಿಗಣಿಸಲು ಯಾವುದೇ ಹೊಸ ಅಂಶಗಳು ಕಂಡುಬರುತ್ತಿಲ್ಲ. ಮೇಲಾಧಿಕಾರಿಗಳ ಪೂರ್ವಾನುಮತಿ ಇಲ್ಲದೆ, ಗೈರುಹಾಜರಾಗಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 186 ಪೊಸಿಅ 2007, ಬೆಂಗಳೂರು, ದಿನಾಂಕ 22–9–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್. ರಾಜಣ್ಣ ಪಿ.ಎಸ್.ಐ., ಮಾಸ್ತಿ ಪೊಲೀಸ್ ಠಾಣೆ ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1765

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## Commerce and Industries Secretariat

**Subject:** Project proposal of M/s Reliance Industries Limited to establish Natural Gas Transportation and Distribution Infrastructure including the City Gas Distribution in Karnataka.

**Read:** Proceedings of the 8th State High Level Clearance Committee (SHLCC) meeting held on 23-2-2007.

**Preamble:**

M/s Reliance Industries Limited proposed to develop Natural Gas Transportation and Distribution Infrastructure including the City Gas Distribution in Karnataka, (60 towns in 27 districts of Karnataka) with an investment of Rs. 12,000 crores. The project propose to provide employment to about 46,000 persons. The Company has requested for various Infrastructure facilities as well as incentives and concessions.

The proposals was placed in the 8th State High Level Clearance Committee (SHLCC) meeting held on 23-2-2007. The committee after detailed discussion approved the project proposal of M/s Reliance Industries Limited and recommended to grant Infrastructure facilities. Hence the following order.

**Government Order No. CI 154 SPI 2007, Bangalore, Dated 19-9-2007**

In the circumstances explained above, Government is pleased to approve project proposal of M/s Reliance Industries Limited to establish Natural Gas Transportation and Distribution Infrastructure including the City Gas Distribution in 60 towns spread over 27 districts of Karnataka as per list appended, with an investment of Rs. 12,000 crores and extend the following infrastructure facilities.

**Infrastructure Facilities:**

**Land:** Revenue Department shall issue direction to the Deputy Commissioners of concerned Districts to permit the Company to buy the Agricultural land U/s. 109 of KLR Act, and thereafter facilitate conversion of the same into industrial use in case the Company proposes to buy Private land directly.

b) In case the Company desires to purchase the converted land after entering into an agreement to purchase the land from landowners, the concerned Deputy Commissioners shall facilitate the conversion of land and transfer of land in the name of Company as per rules.

c) In cases, where the company desires to acquire the land through KIADB such acquisition shall be initiated only after company obtains and submits agreement of consent for acquisition from all landowners with specific land details.

**Power:** Concerned ESCOMs to provide required power.

**Water:** To be supplied from concerned Urban Water Agencies. The promoter is advised to set up sewage treatment plant, adopt water recycling and water harvesting.

**Incentives and Concessions**: Not eligible for any Incentives from Government of Karnataka.

**Environment:** The promoters were advised to obtain CFE from KSPCB and ECC from MOEF, GOI.

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy of Employment to local people. A copy of human resource development plan shall be sent to the Commissioner for I.D. and Director of Industries and Commerce for monitoring.

**Vendor Development:** Where ever there is scope for vendor development for the project, the Company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. and Director of Industries and Commerce for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Commissioner for I.D and Director of Industries and Commerce for monitoring.

**Others:**

- The promoter shall take all statutory and other necessary clearances and shall submit milestones/progress in implementation of the project regularly, which will be monitored buy the Departments concerned.
- Clearance from Ministry of Petroleum Government of India.

- The State Government is free to grant approval to other Companies desirous of providing similar services in the State.
- The Company shall design and execute the natural gas transportation distribution infrastructure and city gas distribution infrastructure in Karnataka as per the Petroleum and Natural Gas Regulatory Board Act 2006 and policy for development of natural gas pipelines or local natural gas distribution network Notification issued by Ministry of Petroleum and Natural Gas, Government of India, Vide No. FNo. L-12022/1/03-GPC/(PT II) dated 20th December 2006 and other Acts and rules already published and to be published in future by Government of India and Government of Karnataka and provide access to other entities for transportation and distribution of CNG.

This approval is valid for a period of two years from the date of issue.

**By Order and in the name of the Governor of Karnataka,**
**K.R. CHANDRAMMA**
Desk Officer (Technical Cell)
Commerce and Industries Department

**Annexure-I**

List of Cities / Towns/ Industrial areas identified for Gas Distribution Projects in Karnataka

| **District** | **City/Town** | **District** | **City/Town** |
|---|---|---|---|
| Bagalkot | Bagalkot | Chikmagalur | Chikmagalur |
| | Mudhol | Chitradurga | Chitradurga |
| | Bangalore | | Adyar |
| | Bommanahalli | Dakshina Kannada | Mangalore |
| | Byatarayanapura | | Puttur |
| | Dasarahalli | Davangere | Davanagere |
| Bangalore | Yelahanka | | Harihar |
| | Kengeri-Kumbalgodu | Dharwad | Hubli-Dharwad |
| | Rajarajeshwarinagar | Gadag | Gadag-Betigeri |
| | Bomasandra-Jigani | | Gulbarga |
| | Athibele | Gulbarga | Wadi |
| | Somanahalli | Hassan | Hassan |
| | Harohalli | Haveri | Ranebennur |
| | Krishnarajapura | Kolar | Kolar |
| | Channapatna | | Kolar Gold Field |
| | Devanhalli | Koppal | Gangavathi |
| | Dod Ballapur | | Belagola |
| Bangalore Rural | Mahadevapura | Mandya | Mandya |
| | Ramanagram | | Hunsur |
| | Bidadi | | Hootgalli |
| | Nelamangala Dobaspet | Mysore | Mysore |
| | Hoskote | | Nanjangud |
| | Belgaum | Raichur | Hatti |
| Belgaum | Ramdurg | | |
| | Sankeshwar | Shimoga | Shimoga |
| Bellary | | | Bhadravathi |
| | Hospet | Tumkur | Tumkur |
| | Bidar | Udupi | Udupi |
| Bidar | Basavakalyan | Uttara Kannada | Bhatkal |
| | Kolhar | | Dandeli |
| Chamarajanagar | Kollegal | | Karwar |

**K.R. CHANDRAMMA**
P.R. No. 1766
Desk Officer (Technical Cell)
Commerce and Industries Department

**ವಸತಿ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2ನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು, ದಿನಾಂಕ 26–6–2007.

2. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊನಿಮ/ಲೆಪಶಾ/ಅನುದಾನ/ 2007–08, ದಿನಾಂಕ 28.7.2007

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ.117.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 836.07 ಲಕ್ಷಗಳು ಒಟ್ಟು ರೂ. 953.57 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ: (2)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2007–08ನೇ ಸಾಲಿನ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 112.50 ಲಕ್ಷಗಳು, ಕೊಳಚೆ ಸುಧಾರಣೆ–ಸಹಾಯ ಧನ ರೂ. 67.50 ಲಕ್ಷಗಳು, ಸಮಗ್ರ ವಸತಿ ಮತ್ತು ಕೊಳಚೆ ಸುಧಾರಣೆ (IHSDP) ಸಹಾಯ ಧನ ರೂ. 1040.00 ಲಕ್ಷಗಳು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ ರೂ. 772.82 ಲಕ್ಷಗಳು ಒಟ್ಟು ಯೋಜನೆಯಡಿ ರೂ. 1157.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 835.33 ಲಕ್ಷಗಳು ಒಟ್ಟು ರೂ. 1992.83 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ವಿವಿಧ ಲೆಕ್ಕಶೀರ್ಷಿಕೆಗಳಡಿ 2ನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು, ದಿನಾಂಕ 27–9–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2007–08ನೇ ಸಾಲಿಗೆ ಎರಡನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ, ಕೊಳಚೆ ಸುಧಾರಣೆ ಸಹಾಯಧನ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ರೂ. 952.83 ಲಕ್ಷ (ಒಂಭತ್ತು ಕೋಟಿ ಐವತ್ತೆರಡು ಲಕ್ಷ ಮತ್ತು ಎಂಭತ್ತಮೂರು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ರೂ. ಲಕ್ಷಗಳಲ್ಲಿ

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಎರಡನೇ ತ್ರೈಮಾಸಿಕ | |
|---|---|---|---|
| | | ಯೋಜನೆ | ಯೋಜನೇತರ |
| 1. | ಸಿಬ್ಬಂದಿ ವೆಚ್ಚ 2217–04–191–2–01 | 50.00 | 62.50 |
| 2. | ಕೊಳಚೆ ಸುಧಾರಣೆ 2217–04–191–2–02 | 67.50 | – |
| 3. | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ 4217–60–800–3–01 | – | 772.83 |
| | ಒಟ್ಟು | **117.50** | **835.33** |

ಈ ಹಣಕಾಸಿನ ಬಗ್ಗೆ ಈ ಕೆಳಕಂಡ ನಿಬಂಧನೆಗಳನ್ನು ವಿಧಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತದೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಎಫ್‌ಡಿ 406 ವೆಚ್ಚ–9/2007, ದಿನಾಂಕ 26–9–2007ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,**
**ಹೆಚ್. ಹನುಮಂತಯ್ಯ**

ಪಿ.ಆರ್. 1769

ಪೀಠಾಧಿಕಾರಿ–1,
ವಸತಿ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಮೇಲುಕೋಟೆ ಸಂಸ್ಕೃತ ಸಂಶೋಧನಾ ಅಕಾಡೆಮಿ, ಮೇಲುಕೋಟೆ ಈ ಸಂಘದಲ್ಲಿ ನಡೆದಿದ್ದ ಅವ್ಯವಹಾರಗಳ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 136 ಎಂಇಟಿ 76, ದಿನಾಂಕ 15–10–1976.
2. ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 14 ಎಸ್‌ಎಸ್‌ಆರ್ 80, ದಿನಾಂಕ 10–4–1980
3. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 10 ಎಸ್‌ಡಿಇ 83, ದಿನಾಂಕ 16–6–1983
4. ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 14 ಎಸ್‌ಎಸ್‌ಆರ್ 80, ದಿನಾಂಕ 19.5.1980
5. ಸರ್ಕಾರದ ಆದೇಶ ಸಂಖ್ಯೆ: ಕಂಇ 62 ಮುನೋಸೊ 2004 (ಭಾಗ), ದಿನಾಂಕ 26–10–2004
6. ಜಿಲ್ಲಾ ನೋಂದಣಾಧಿಕಾರಿಗಳ ನಡವಳಿ ಸಂಖ್ಯೆ: ಎಸ್‌ಓಆರ್:2:77–78/2004–05, ದಿನಾಂಕ 18.4.2005 / 20.4.2005.

**ಪ್ರಸ್ತಾವನೆ:**

ಮೇಲುಕೋಟೆ ಸಂಸ್ಕೃತ ಸಂಶೋಧನಾ ಅಕಾಡೆಮಿಯಲ್ಲಿ ಸಂಸ್ಕೃತ ಶಿಕ್ಷಣ ಹಾಗೂ ಸಂಶೋಧನೆ ನಡೆಸಲು ಅನುವಾಗುವಂತೆ ಯೋಜನೆ ಇಲಾಖೆಯು ಯೋಜನೆಯೊಂದನ್ನು ರೂಪಿಸಿದೆ. ಈ ಯೋಜನೆಯ ಪ್ರಕಾರ ಸಂಶೋಧನಾ ಸಂಸ್ಥೆ ಸ್ಥಾಪಿಸಲಾಗಿದ್ದು, ಅದರ ಉಸ್ತುವಾರಿ ನೋಡಿಕೊಳ್ಳಲು ಒಂದು ವ್ಯವಸ್ಥಾಪಕಿ ಮಂಡಳಿಯನ್ನು 3 ವರ್ಷಗಳ ಅವಧಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 15–10–1976ರ ಆದೇಶದಲ್ಲಿ ರಚಿಸಲಾಗಿದೆ. ಸದರಿ ವ್ಯವಸ್ಥಾಪಕ ಮಂಡಳಿಯಲ್ಲಿ ಶ್ರೀ ಎಂ.ಎ. ಲಕ್ಷ್ಮಿ ತಾತಾಚಾರ್ ಇವರನ್ನು ಜಂಟಿ ಕಾರ್ಯದರ್ಶಿಗಳನ್ನಾಗಿ ನೇಮಿಸಲಾಗಿತ್ತು. ಈ ವ್ಯವಸ್ಥಾಪಕ ಮಂಡಳಿಯು ವಿವಿಧ ಮೂಲಗಳಿಂದ ಹಣ ಸಂಗ್ರಹಿಸುವುದು, ಯೋಜನಾ ಕಾರ್ಯ ರೂಪಕ್ಕೆ ತರಲು ಉಪ ಸಮಿತಿಗಳನ್ನು 2–3 ಸದಸ್ಯರುಗಳನ್ನೊಳಗೊಂಡಂತೆ ರಚಿಸಲು ಅವಕಾಶ ಕಲ್ಪಿಸಲಾಗಿದೆ. ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಪ್ರಕಾರ ನೋಂದಣಿಯಾಗಿದ್ದು, ಸದರಿ ವ್ಯವಸ್ಥಾಪಕ ಮಂಡಳಿಯು ಇದುವರೆಗೂ ಮುಂದುವರೆದಿದೆ.

ಮೇಲೆ ಓದಲಾದ 2, 3 ಮತ್ತು 4ರಲ್ಲಿನ ಆದೇಶಗಳ ಪ್ರಕಾರ ನಿವೃತ್ತ ಸರ್ಕಾರಿ ನೌಕರರಿಗೆ ಉನ್ನತ ಹುದ್ದೆಯಲ್ಲಿ ಪುನರ್ ನೇಮಕ ಮಾಡಿಕೊಳ್ಳಲು ಅವಕಾಶವಿರುವುದಿಲ್ಲ. ಇದರ ಜೊತೆಗೆ ಸಂಸ್ಥೆಯ ಸೇವಾ ನಿಯಮ 1982ರಂತೆ ವಯೋಮಾನ 62ರ ನಂತರ ಮುಂದುವರಿಯುವಿಕೆಗೆ ಅವಕಾಶವಿರುವುದಿಲ್ಲ. ಶ್ರೀ ಎಂ.ಎ. ಲಕ್ಷ್ಮಿ ತಾತಾಚಾರ್ ಇವರು ಸಂಸ್ಥೆಯ ನಿರ್ದೇಶಕರಾಗಿ ನೇಮಕ ಹೊಂದಿದ್ದು, ಅವರನ್ನು ಪುನರ್ ನೇಮಕಾತಿ ಮಾಡಿಕೊಳ್ಳುವುದಕ್ಕಾಗಲಿ ಅಥವಾ ಅವರ ವಯೋನಿವೃತ್ತಿಯ ನಂತರ ಮುಂದುವರಿಕೆಗಾಗಲೀ ಅವಕಾಶವಿರುವುದಿಲ್ಲ. ದಿನಾಂಕ 19–5–80ರ ಅಧಿಕೃತ ಜ್ಞಾಪನದನ್ವಯ ಸದರಿಯವರನ್ನು 62 ವಯೋಮಿತಿಯವರೆಗೆ ಮುಂದುವರೆಯಲು ಅವಕಾಶವಿದ್ದು, ಈಗ ಅವರು 68 ವರ್ಷಗಳ ವಯೋ ವೃದ್ಧರಾಗಿದ್ದು, ಮೇಲ್ಕಂಡ ನಿಯಮಗಳ ಅನ್ವಯ ಕಾನೂನು ಬಾಹಿರವಾಗಿ ಅವರು ಮುಂದುವರೆದಿರುವುದು ದಾಖಲೆಗಳಿಂದ ದೃಢಪಟ್ಟಿದೆ. ಶ್ರೀ ಎಂ.ಎ. ಲಕ್ಷ್ಮಿ ತಾತಾಚಾರ್‌ರವರು ಈ ಹಿಂದೆ ಸಂಸ್ಥೆಯ ನಿರ್ದೇಶಕರು ಹಾಗೂ ಜಂಟಿ ಕಾರ್ಯದರ್ಶಿಗಳಾಗಿದ್ದಾಗ ಅವರ ಮೇಲೆ ಗುರುತರವಾದ ಆರೋಪ ಕಂಡು ಬಂದ ಹಿನ್ನೆಲೆಯಲ್ಲಿ ಮೇಲೆ ಓದಲಾದ (5)ರ ದಿನಾಂಕ 26.10.2004ಲ್ಲಿ ಸದರಿಯವರು ಎಸಗಿದ್ದಾರೆ ಎನ್ನಲಾದ ಆರೋಪಗಳ ಬಗ್ಗೆ ತನಿಖೆ ನಡೆಯಿಸಲು ಮಂಡ್ಯ ಜಿಲ್ಲಾ ನೋಂದಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ತನಿಖಾ ಸಮಿತಿ ರಚಿಸಿದ್ದು, ತನಿಖೆಯ ಸಮಯದಲ್ಲಿ ಸದರಿಯವರ ವಿರುದ್ಧ ಹಣಕಾಸು ದುರುಪಯೋಗ ಹಾಗೂ ಇತರ ಆರೋಪಗಳು ಸಾಬೀತಾಗಿರುವುದು ತನಿಖಾ ವರದಿಯಿಂದ ದೃಢಪಟ್ಟಿದೆ. ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25(1)ರ ಪ್ರಕಾರ ವಿಚಾರಣೆ ನಡೆಸಲು ತೀರ್ಮಾನಿಸಿ ಮಂಡ್ಯ ಉಪ ವಿಭಾಗಾಧಿಕಾರಿಗಳನ್ನು ವಿಚಾರಣಾಧಿಕಾರಿಗಳನ್ನಾಗಿ ದಿನಾಂಕ 25.10.2004ರಲ್ಲಿ ಜಿಲ್ಲಾ ನೋಂದಣಾಧಿಕಾರಿಗಳ ಆದೇಶ ಸಂಖ್ಯೆ: ಎಸ್‌ಓಆರ್/2/77–78ರಲ್ಲಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ದಿನಾಂಕ 28–3–2005ರಂದು ವಿಚಾರಣಾ ವರದಿ ಸಲ್ಲಿಸಿದ್ದು ಸಂಘದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಎಂ.ಎ. ಲಕ್ಷ್ಮಿ ತಾತಾಚಾರ್, ಜಂಟಿ ಕಾರ್ಯದರ್ಶಿ ಹಾಗೂ ಅಕಾಡೆಮಿಯ ನಿರ್ದೇಶಕರವರ ವಿರುದ್ಧ 18 ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ವಿಚಾರಣಾ ವರದಿ ಒಪ್ಪಿಸಿದ್ದರು. ಸದರಿ ವರದಿಯ ಪ್ರಕಾರ ಅಕಾಡೆಮಿಯ ಮ್ಯಾನೇಜಿಂಗ್ ಕಮಿಟಿಯ ನಿರ್ದೇಶಕರವರಿಗೆ ಸ್ವಯಂ ತೀರ್ಮಾನ ಕೈಗೊಳ್ಳಲು ಅವಕಾಶ ಇಲ್ಲದೇ ಇರುವುದು, ಅಕಾಡೆಮಿಯಲ್ಲಿ ಸಿಬ್ಬಂದಿ ವರ್ಗವನ್ನು ನೇಮಿಸಿಕೊಳ್ಳುವ ಅಧಿಕಾರ ಇಲ್ಲದಿದ್ದರೂ ಸಹ ಶ್ರೀ ಎಂ.ಎ. ಲಕ್ಷ್ಮಿ ತಾತಾಚಾರ್ ಈ ಅಕಾಡೆಮಿಯ ಸರ್ವಾಧಿಕಾರಿಯಂತೆ ಕರ್ತವ್ಯನಿರ್ವಹಿಸುತ್ತಿರುವುದು ದೃಢಪಟ್ಟಿದೆ. ಅಲ್ಲದೆ ಸಂಘದ ನಿಯಮ ನಿಬಂಧನೆಗಳ ಪ್ರಕಾರ ಅವರ ಅವಧಿಯಲ್ಲಿ ಕೆಲಸ ಕಾರ್ಯಗಳು ನಡೆದು ಬಂದಿರುವುದಿಲ್ಲ ಹಾಗೂ ಅನುದಾನದ ದುರುಪಯೋಗ ಮಾಡಿರುವುದು ದೃಢಪಟ್ಟಿದೆ.

ಮೇಲೆ (6)ರಲ್ಲಿ ಓದಲಾದ ದಿನಾಂಕ 20–4–2005ರ ಜಿಲ್ಲಾ ನೋಂದಣಾಧಿಕಾರಿಗಳ ಆದೇಶದಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25 ಮತ್ತು 27ರ ಅಡಿಯಲ್ಲಿ ಇರತಕ್ಕ ಅಧಿಕಾರವನ್ನು ಚಲಾಯಿಸುತ್ತಾ, ವಿಚಾರಣಾಧಿಕಾರಿಯವರ ವರದಿಯನ್ನು ಸಂಪೂರ್ಣವಾಗಿ ಒಪ್ಪಿರುತ್ತಾರೆ. ಶ್ರೀ ಎಂ.ಎ. ಲಕ್ಷ್ಮಿ ತಾತಾಚಾರ್ ರವರಿಂದ ನಡೆದಿದೆ ಎನ್ನಲಾದ ಅಧಿಕಾರ ದುರುಪಯೋಗ ಹಾಗೂ ಸರ್ಕಾರದ ಅನುದಾನ ದುರುಪಯೋಗ ಎಲ್ಲಾ ಸಾಬೀತಾಗಿರುವುದರಿಂದ ಅವರಿಂದ ಹಣ ವಸೂಲು ಮಾಡಲು ನಿರ್ದೇಶನ ನೀಡಲಾಗಿರುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ಸಮಗ್ರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 62 ಮುನೋಸೊ 2004 (ಭಾಗ), ಬೆಂಗಳೂರು, ದಿನಾಂಕ 26–9–2007**

ಶ್ರೀ ಎಂ.ಎ. ಲಕ್ಷ್ಮಿ ತಾತಾಚಾರ್, ಹಿಂದಿನ ನಿರ್ದೇಶಕರು ಹಾಗೂ ಜಂಟಿ ಕಾರ್ಯದರ್ಶಿಗಳು, ಸಂಸ್ಕೃತ ಸಂಶೋಧನಾ ಅಕಾಡೆಮಿ, ಮೇಲುಕೋಟೆ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ ರವರಿಂದ ಅಧಿಕಾರ ದುರುಪಯೋಗ ಹಾಗೂ ಸರ್ಕಾರದ ಅನುದಾನ ದುರುಪಯೋಗವಾಗಿರುವುದು ದಾಖಲೆಗಳ ಮತ್ತು ವರದಿಗಳ ಮುಖಾಂತರ ಸಾಬೀತಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಸಂಸ್ಥೆಯ ಸೇವಾ ನಿಯಮ 1982 ಮತ್ತು ಸರ್ಕಾರದ ಆದೇಶಕ್ಕೆ ವಿರುದ್ಧವಾಗಿ ಕಾನೂನು

ಬಾಹಿರವಾಗಿ 68 ವರ್ಷ ವಯೋಮಾನವಾಗಿದ್ದರೂ ಮುಂದುವರೆಯಲು ಅವಕಾಶವಿರುವುದಿಲ್ಲ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಅಕಾಡೆಮಿಯ ಅಭಿವೃದ್ಧಿ ಹಾಗೂ ಹಿತದೃಷ್ಟಿಯಿಂದ ಕರ್ನಾಟಕ ಸರ್ಕಾರದ ಕಂದಾಯ ಇಲಾಖೆಯ ಮುಖಾಂತರವೇ ಇವರನ್ನು ಸದಸ್ಯರನ್ನಾಗಿ ನೇಮಕ ಮಾಡಿರುವುದರಿಂದ, ಹಾಗೂ ಸದರಿ ಸಂಸ್ಥೆಯು ಸಂಘ ಸಂಸ್ಥೆಗಳ ಕಾಯ್ದೆ, 1960ರಡಿಯಲ್ಲಿ ನೋಂದಾಯಿಸಲ್ಪಟ್ಟಿದ್ದು, ಸಂಸ್ಥೆಯ ಬೈಲಾ ಪ್ರಕಾರ ಸಂಸ್ಥಾಪಕ ಸದಸ್ಯರನ್ನು ನೇಮಕ ಮಾಡುವ ಅಂತಿಮ ಅಧಿಕಾರವು ಸರ್ಕಾರದ್ದೇ ಆಗಿರುವುದರಿಂದ, ಇವರ ಸಂಸ್ಥಾಪಕ ಸದಸ್ಯತ್ವವನ್ನು ರದ್ದುಪಡಿಸಲಾಗಿದೆ ಹಾಗೂ ಹಣ ವಸೂಲಾತಿಯ ಬಗ್ಗೆ ಮುಂದಿನ ಅಗತ್ಯ ಕ್ರಮ ಕೈಗೊಳ್ಳುವಂತೆ ಉನ್ನತ ಶಿಕ್ಷಣ ಇಲಾಖೆಗೆ ಸೂಚಿಸಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**
**ಶಿವಲಿಂಗ**

ಪಿ.ಆರ್. 1770 ಪೀಠಾಧಿಕಾರಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## Energy Secretariat

## Corrigendum

### No. EN 340 NCE 2007, Bangalore, Dated 1.10.2007

In Government Order No. EN 50 NCE 2006, dated 21.4.2006 wherever the name of the company appears as:-

"M/s Maruthi Developers and Constructions (P) Limited"

**Shall be read as**

"M/s Maruthi Power Infra Bangalore Private Limited".

**By Order and in the name of the Governor of Karnataka,**
**SURESH B. KRISHNAPPANAVAR,**

P.R. No. 1772 Under Secretary to Government,
Energy Department

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಬೈಫ್ ಕೇಂದ್ರಗಳ ಸೇವಾ ವೆಚ್ಚವನ್ನು ಮುಂದುವರೆಸುವ ಬಗ್ಗೆ.

**ಉಲ್ಲೇಖ:**
1. ರಾಜ್ಯ ಮಟ್ಟದ ಬೈಫ್ ಸಮಿತಿಯ ಪರಿಶೀಲನಾ ಸಭೆ ದಿನಾಂಕ 27.9.2005.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 4 (ಇತರೆ) ಎಸ್‌ಇಪಿ 2005, ದಿನಾಂಕ 19.12.2005
3. ಅ.ಟಿ.ಸಂ. ಪಸಂಮ 138 ಪಪಾಯೋ 2005, ದಿನಾಂಕ 26.12.2005
4. ಸಂ. ನಿಪಸಂ ಎಸ್‌ಎಫ್‌ಡಿಎ ಬೈಫ್ 2004–05, ದಿನಾಂಕ 23.1.2006.
5. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 18 ಎಸ್‌ಇಪಿ ಇತರೆ 2005, ದಿನಾಂಕ 27.2.2006
6. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 18 ಎಸ್‌ಇಪಿ ಇತರೆ 2005, ದಿನಾಂಕ 17.5.2006 ಮತ್ತು 19.1.2007.
7. ಬೈಫ್ ಕೇಂದ್ರಕ್ಕೆ ಸಂಬಂಧಪಟ್ಟ ಜಿಲ್ಲೆಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತಿ ಪತ್ರದ ದಿನಾಂಕ 18.6.07/6.7.07/13.7.07/23.7.07/24.7.07.
8. ರಾಜ್ಯ ಮಟ್ಟದ ಬೈಫ್ ಸಮಿತಿಯ ಪರಿಶೀಲನಾ ಸಭೆಯ ದಿನಾಂಕ 24.7.2007.

**ಪ್ರಸ್ತಾವನೆ:**

ಸರ್ಕಾರದ ಆದೇಶ ಉಲ್ಲೇಖ (6)ರಲ್ಲಿ ಬೈಫ್ ಕೇಂದ್ರಗಳಿಗೆ ಸೇವಾ ವೆಚ್ಚವನ್ನು ಪಾವತಿಸಲು ದಿನಾಂಕ 31.3.2007 ರವರೆಗೆ ಮಂಜೂರಾತಿ ನೀಡಲಾಗಿತ್ತು. ಉಲ್ಲೇಖ (1)ರ ದಿನಾಂಕ 27.9.2005ರಲ್ಲಿ ರಾಜ್ಯ ಮಟ್ಟದ ಬೈಫ್ ಪರಿಶೀಲನಾ ಸಮಿತಿಯ ಸಭೆಯಲ್ಲಿ ಸದರಿ ಸೇವಾ ವೆಚ್ಚವನ್ನು ನಾಲ್ಕು ವರ್ಷಗಳವರೆಗೆ ಎಸ್‌ಜಿಎಸ್‌ವೈ ಮೂಲಭೂತ ಸೌಕರ್ಯ ನಿಧಿಯಿಂದ 1,62,000/– ಗಳಂತೆ ಪ್ರತಿ ಕೇಂದ್ರಕ್ಕೆ ಪ್ರತಿ ವರ್ಷಕ್ಕೆ ಶೇಕಡಾ 5ರಷ್ಟು ಏರು ಬೆಲೆ ಹೆಚ್ಚಿಸುವುದಕ್ಕೆ ದಿನಾಂಕ 1.10.2005 ರಿಂದ 31.3.2010ರವರೆಗೆ ಮುಂದುವರೆಸಲು ತೀರ್ಮಾನಿಸಲಾಗಿದೆ. ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಲ್ಲಿ ವರ್ಷಾವಾರು ಅನುದಾನ ಬರುತ್ತಿದ್ದು ಈ ಕೇಂದ್ರಗಳನ್ನು ಪ್ರತಿ ವರ್ಷ ನವೀಕರಿಸಬೇಕಾಗುತ್ತದೆ. ಈ ವಿಷಯವಾಗಿ 70 ಕೇಂದ್ರಗಳಿರುವ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್‌ರವರ ಅಭಿಪ್ರಾಯವನ್ನು ಕೇಳಲಾಗಿತ್ತು. ಸಂಬಂಧಪಟ್ಟ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್‌ರವರು ಕೇಂದ್ರವನ್ನು ಮುಂದುವರೆಸಲು ತಮ್ಮ ಅಭಿಪ್ರಾಯವನ್ನು ನೀಡಿರುತ್ತಾರೆ. ದಿನಾಂಕ 24.7.2007ರಂದು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಕೇಂದ್ರವನ್ನು ದಿನಾಂಕ 31.3.2008ರವರೆಗೆ ಮುಂದುವರೆಸಲು ಅನುಮೋದಿಸಿದ್ದಾರೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 18 ಎಸ್‌ಇಪಿ (ಇತರೆ) 2005, ಬೆಂಗಳೂರು, ದಿನಾಂಕ 25–9–2007**

ಬೈಫ್ ಸಂಸ್ಥೆಯ ವತಿಯಿಂದ ನಿರ್ವಹಿಸುತ್ತಿರುವ ಅನುಬಂಧ–1ರಲ್ಲಿ ತಿಳಿಸಿರುವ 70 ಕೇಂದ್ರಗಳನ್ನು ದಿನಾಂಕ 1.4.2007ರಿಂದ 31.3.2008ರವರೆಗೆ ಜಾರಿಗೆ ಬರುವಂತೆ ಒಂದು ವರ್ಷ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಒಂದು ಕೇಂದ್ರದ ನಿರ್ವಹಣಾ ವೆಚ್ಚ ಪ್ರತಿ ವರ್ಷ ರೂ. 1,62,000/-ಗಳನ್ನು ಹಾಗೂ ಪ್ರತಿ ವರ್ಷ ಶೇಕಡಾ 5ರಷ್ಟು ಏರು ಬೆಲೆ ಹೆಚ್ಚಿಸಿರುವುದಕ್ಕೂ ಸಹ ಸರ್ಕಾರವು ಮಂಜೂರಾತಿ ನೀಡಿದೆ. ಪ್ರತಿ ಗರ್ಭಧಾರಣೆಗೆ ಬಡತನ ರೇಖೆಗೆ ಒಳಪಡುವುದರಿಂದ ರೂ. 15/- ಮತ್ತು ಬಡತನ ರೇಖೆಗೆ ಒಳಪಡದೇ ಇರುವವರಿಂದ ರೂ. 25/-ಗಳ ಸೇವಾ ವೆಚ್ಚವನ್ನು ವಸೂಲಿ ಮಾಡಿ ಸಂಬಂಧಪಟ್ಟ ಜಿಲ್ಲೆಗಳ ಪಶು ಸಂಗೋಪನಾ ಇಲಾಖೆಯ ಉಪ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಜಮಾ ಮಾಡಬೇಕಾಗಿರುತ್ತದೆ. ಬೈಫ್ ಕೇಂದ್ರಗಳು ನಕಲಿಯಾಗದಂತೆ ಎಚ್ಚರ ವಹಿಸಲು ಸೂಚಿಸಿದೆ. ಈ ಕುರಿತು ಬೈಫ್ ಸಂಸ್ಥೆಯು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಯೊಂದಿಗೆ ಮಾರ್ಪಡಿಸಿದ ಕರಾರು ಒಪ್ಪಂದವನ್ನು ದಿನಾಂಕ 1.4.2007 ರಿಂದ 31.3.2008ರವರೆಗೆ ಜಾರಿಗೆ ಬರುವಂತೆ ಮಾಡಿಕೊಳ್ಳುವುದು.

ಸದರಿ ಕೇಂದ್ರಗಳಿಗೆ ಹಣ ಬಿಡುಗಡೆ ಮಾಡುವ ಮುನ್ನ ಯೋಜನಾ ನಿರ್ದೇಶಕರು, ಡಿಆರ್‌ಡಿಎರವರು ಖುದ್ದಾಗಿ ಬೈಫ್ ಕೇಂದ್ರಗಳಿಗೆ ಭೇಟಿ ನೀಡಿ ಪ್ರಗತಿ ಪರಿಶೀಲಿಸಿ ನಂತರ ಹಣ ಬಿಡುಗಡೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಶಿರೋಳ್**

ನಿರ್ದೇಶಕರು (ಪ್ರಭಾರ)
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ-1**

**ಬೈಫ್ ಕೃತಕ ಗರ್ಭಧಾರಣೆ ಕೇಂದ್ರಗಳು ನಡೆಯುತ್ತಿರುವ ಸ್ಥಳಗಳು**

| ಕ್ರ. ಸಂ. | ಕೇಂದ್ರದ ಹೆಸರು | ಪ್ರಾಯೋಜಕರು |
|---|---|---|
| 1. | ಹಗರಿಗಜಾಪುರ | ಜಿಲ್ಲಾ ಪಂಚಾಯತ್, ದಾವಣಗೆರೆ |
| 2. | ಮೈದೂರು | ಜಿಲ್ಲಾ ಪಂಚಾಯತ್, ದಾವಣಗೆರೆ |
| 3. | ಕೊಂಡಲಹಳ್ಳಿ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 4. | ಮುದ್ದಾಪುರ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 5. | ಐಕ್ಕಯಾಗಟ್ಟಿ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 6. | ರಂಗೇನಹಳ್ಳಿ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 7. | ಬಂಡೆಬೊಮ್ಮನಹಳ್ಳಿ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 8. | ಕಲಿಯೂರು | ಜಿಲ್ಲಾ ಪಂಚಾಯತ್, ಮೈಸೂರು |
| 9. | ಹುಂಡಿಮಾಲಾ | ಜಿಲ್ಲಾ ಪಂಚಾಯತ್, ಮೈಸೂರು |
| 10. | ಹೆಬ್ಬಲಗುಪ್ಪೆ | ಜಿಲ್ಲಾ ಪಂಚಾಯತ್, ಮೈಸೂರು |
| 11. | ಹಿರೇಜಾವೂರು | ಜಿಲ್ಲಾ ಪಂಚಾಯತ್, ರಾಯಚೂರು |
| 12. | ಹರವಿ | ಜಿಲ್ಲಾ ಪಂಚಾಯತ್, ರಾಯಚೂರು |
| 13. | ಬಿಗಭಾವಿ | ಜಿಲ್ಲಾ ಪಂಚಾಯತ್, ರಾಯಚೂರು |
| 14. | ಹಿರೇ ಅರಳಿಹಳ್ಳಿ | ಜಿಲ್ಲಾ ಪಂಚಾಯತ್, ಕೊಪ್ಪಳ |
| 15. | ಮಸಬಂಜಿನಾಳ | ಜಿಲ್ಲಾ ಪಂಚಾಯತ್, ಕೊಪ್ಪಳ |
| 16. | ಬೂದಿಗುಂಪಾ | ಜಿಲ್ಲಾ ಪಂಚಾಯತ್, ಕೊಪ್ಪಳ |
| 17. | ಸಂಗಾಪುರ | ಜಿಲ್ಲಾ ಪಂಚಾಯತ್, ಕೊಪ್ಪಳ |
| 18. | ಹಿರೇಬಗನಾಳ | ಜಿಲ್ಲಾ ಪಂಚಾಯತ್, ಕೊಪ್ಪಳ |
| 19. | ಮಾನ್ವರ-ಮಸನವಾಡೆ | ಜಿಲ್ಲಾ ಪಂಚಾಯತ್, ಬಳ್ಳಾರಿ |
| 20. | ಕೋಳೂರು | ಜಿಲ್ಲಾ ಪಂಚಾಯತ್, ಬಳ್ಳಾರಿ |
| 21. | ತಾಳೂರು | ಜಿಲ್ಲಾ ಪಂಚಾಯತ್, ಬಳ್ಳಾರಿ |
| 22. | ಉಲವತ್ತಿ | ಜಿಲ್ಲಾ ಪಂಚಾಯತ್, ಬಳ್ಳಾರಿ |
| 23. | ಜಿ. ಕೋಡಿಹಳ್ಳಿ | ಜಿಲ್ಲಾ ಪಂಚಾಯತ್, ಬಳ್ಳಾರಿ |
| 24. | ಕಿಬ್ಬನಹಳ್ಳಿ | ಜಿಲ್ಲಾ ಪಂಚಾಯತ್, ತುಮಕೂರು |
| 25. | ಎಸ್. ಲಕ್ಕಿಹಳ್ಳಿ | ಜಿಲ್ಲಾ ಪಂಚಾಯತ್, ತುಮಕೂರು |
| 26. | ಬೆಂಗರಹಳ್ಳಿ | ಜಿಲ್ಲಾ ಪಂಚಾಯತ್, ತುಮಕೂರು |
| 27. | ಎಸ್. ಬಿದರೆ | ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು |
| 28. | ಅಣ್ಣೀಗೆರೆ | ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು |
| 29. | ಶಿರಬೂರ್ | ಜಿಲ್ಲಾ ಪಂಚಾಯತ್, ಬಿಜಾಪುರ |

| | | |
|---|---|---|
| 30. | ಹುಣಸಿಯಾಳ್ ಪಿ.ಬಿ. | ಜಿಲ್ಲಾ ಪಂಚಾಯತ್, ಬಿಜಾಪುರ |
| 31. | ಮುಧೋಳ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 32. | ಹನಗಂಡಿ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 33. | ಯಲ್ಲಟ್ಟಿ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 34. | ಖಾನಪೂರ ಎಸ್.ಕೆ. | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 35. | ಲೋಕಾಪುರ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 36. | ಪಿ.ಡಿ. ಬುದ್ನಿ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 37. | ಯಡಹಳ್ಳಿ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 38. | ಮಲ್ಲಾಬಾದ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 39. | ಜೀವಣಗಿ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 40. | ಶಿರಡೋನ್ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 41. | ನೀರ್ಗುಡಿ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 42. | ಬೆಟಜೇವರಗಿ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 43. | ಅಳಂಗಾ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 44. | ಹಳ್ಳಿಸಲಗಾರ್ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 45. | ಲಾಡ-ಚಿಂಚೋಳ್ಳಿ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 46. | ದರ್ಗಾಶಿರೂನ್ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 47. | ನಂದಿಕೂರ್ | ಜಿಲ್ಲಾ ಪಂಚಾಯತ್, ಗುಲ್ಬರ್ಗಾ |
| 48. | ಏಕ್ಕಂಬಾ | ಜಿಲ್ಲಾ ಪಂಚಾಯತ್, ಬೀದರ್ |
| 49. | ಹಿಪ್ಪರಗಾಂವ್ | ಜಿಲ್ಲಾ ಪಂಚಾಯತ್, ಬೀದರ್ |
| 50. | ಅಣದೂರು | ಜಿಲ್ಲಾ ಪಂಚಾಯತ್, ಬೀದರ್ |
| 51. | ಸಿದ್ಧೇಶ್ವರ | ಜಿಲ್ಲಾ ಪಂಚಾಯತ್, ಬೀದರ್ |
| 52. | ಹೊಳೇಸಮುದ್ರ | ಜಿಲ್ಲಾ ಪಂಚಾಯತ್, ಬೀದರ್ |
| 53. | ಬೆಳ್ಳೂರು | ಜಿಲ್ಲಾ ಪಂಚಾಯತ್, ಮಂಡ್ಯ |
| 54. | ಜಕ್ಕಲಿ | ಜಿಲ್ಲಾ ಪಂಚಾಯತ್, ಗದಗ್ |
| 55. | ಗೊಜನೂರು | ಜಿಲ್ಲಾ ಪಂಚಾಯತ್, ಗದಗ್ |
| 56. | ಬಿಂಕದಕಟ್ಟಿ | ಜಿಲ್ಲಾ ಪಂಚಾಯತ್, ಗದಗ್ |
| 57. | ಕೊರಲಹಳ್ಳಿ | ಜಿಲ್ಲಾ ಪಂಚಾಯತ್, ಗದಗ್ |
| 58. | ಪ್ರಧಾನಿ | ಜಿಲ್ಲಾ ಪಂಚಾಯತ್, ಉತ್ತರ ಕನ್ನಡ |
| 59. | ಅಚವೆ | ಜಿಲ್ಲಾ ಪಂಚಾಯತ್, ಉತ್ತರ ಕನ್ನಡ |
| 60. | ಸಂತೆಗುಳಿ | ಜಿಲ್ಲಾ ಪಂಚಾಯತ್, ಉತ್ತರ ಕನ್ನಡ |
| 61. | ಬುಡಲ | ಜಿಲ್ಲಾ ಪಂಚಾಯತ್, ಉತ್ತರ ಕನ್ನಡ |
| 62. | ಗರಗನಹಳ್ಳಿ ಗೇಟ್ | ಜಿಲ್ಲಾ ಪಂಚಾಯತ್, ಚಾಮರಾಜನಗರ |
| 63. | ಅಜ್ಜಿಪುರ | ಜಿಲ್ಲಾ ಪಂಚಾಯತ್, ಚಾಮರಾಜನಗರ |
| 64. | ಗಂಜಿಯಾಪುರ | ಜಿಲ್ಲಾ ಪಂಚಾಯತ್, ಧಾರವಾಡ |
| 65. | ಚೇವರಹುಬ್ಬಳ್ಳಿ | ಜಿಲ್ಲಾ ಪಂಚಾಯತ್, ಧಾರವಾಡ |
| 66. | ನಾಯ್ಕನೂರು | ಜಿಲ್ಲಾ ಪಂಚಾಯತ್, ಧಾರವಾಡ |
| 67. | ಸೋಮನಕಟ್ಟೆ | ಜಿಲ್ಲಾ ಪಂಚಾಯತ್, ಹಾವೇರಿ |
| 68. | ಹೊಸ ಹಲಸೂರು | ಜಿಲ್ಲಾ ಪಂಚಾಯತ್, ಹಾವೇರಿ |
| 69. | ಬಿಲ್ಲಹಳ್ಳಿ | ಜಿಲ್ಲಾ ಪಂಚಾಯತ್, ಹಾವೇರಿ |
| 70. | ಶಿಶುವಿನಾಳ | ಜಿಲ್ಲಾ ಪಂಚಾಯತ್, ಹಾವೇರಿ |

**ಸಿ.ಎಂ. ಶಿರೋಳ್**

ಪಿ.ಆರ್. 1767

ನಿರ್ದೇಶಕರು (ಪ್ರಭಾರ)
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ವಿಷಯ: ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ 2006-07ನೇ ಸಾಲಿಗೆ ಸೇರಿದ ರಾಜ್ಯದ ಪಾಲಿನ ಮೂರನೇ ಹೆಚ್ಚುವರಿ ಕಂತಿನ ಬಾಕಿ ಅನುದಾನವನ್ನು ರಾಜ್ಯದ 6 ಜಿಲ್ಲೆಗಳಿಗೆ ಬಿಡುಗಡೆ ಮಾಡುತ್ತಿರುವ ಬಗ್ಗೆ.

ಉಲ್ಲೇಖ: 1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಜೆ.12022/1/2006 ಎಸ್‌ಜಿಆರ್‌ವೈ Sl.No. 203, ದಿನಾಂಕ 30-3-07.
2. ಆರ್ಥಿಕ ಇಲಾಖೆಯ ಆದೇಶ ಸಂ: ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ 14.7.2005.
3. ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂ. ಎಫ್‌ಡಿ 7 ಬಿಪಿಇ 2007, ದಿನಾಂಕ 30.3.2007.
4. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 15 ಎಸ್‌ಜಿಆರ್ 07, ದಿನಾಂಕ 21.8.2007.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು 2006-07ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಉಲ್ಲೇಖ (1)ರ ಪತ್ರದಲ್ಲಿ ಕೇಂದ್ರದ ಪಾಲಿನ ಮೂರನೇ ಕಂತಿನ ಹೆಚ್ಚುವರಿ ಅನುದಾನವನ್ನು ಸಂಬಂಧಪಟ್ಟ 22 ಜಿಲ್ಲಾ ಪಂಚಾಯತಿಗಳಿಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. ಅದರಂತೆ ಉಲ್ಲೇಖ (4)ರ ಆದೇಶದಲ್ಲಿ ರಾಜ್ಯದ ಪಾಲಿನ ಬಾಕಿ ಅನುದಾನ ರೂ. 222.15 ಲಕ್ಷಗಳನ್ನು ಜಿಲ್ಲಾ ಪಂಚಾಯತಿ ಕಾರ್ಯಕ್ರಮಗಳಿಗಾಗಿ ಬಿಡುಗಡೆ ಮಾಡಲಾಗಿದ್ದು, ಬಾಕಿ ರೂ. 48.493 ಲಕ್ಷಗಳನ್ನು 6 ಜಿಲ್ಲೆಗಳಿಗೆ ಆಡಳಿತಾತ್ಮಕ ತೊಂದರೆಗಳಿಂದಾಗಿ ಬಿಡುಗಡೆ ಮಾಡಲು ಸಾಧ್ಯವಾಗಲಿಲ್ಲ. ಪ್ರಸ್ತುತ 2007-08ನೇ ಸಾಲಿಗೆ ಲಭ್ಯವಿರುವ ಅನುದಾನದಲ್ಲಿ ಸದರಿ ಅನುದಾನವನ್ನು ಜಿಲ್ಲಾ ಪಂಚಾಯತಿ ಕಾರ್ಯಕ್ರಮಗಳಿಗಾಗಿ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 15 ಎಸ್‌ಜಿಆರ್ 2007, ಬೆಂಗಳೂರು, ದಿನಾಂಕ 26-9-2007**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಎಸ್‌ಜಿಆರ್‌ವೈ ಯೋಜನೆಯಡಿ 2006-07ನೇ ಸಾಲಿಗೆ ಸೇರಿದ ಜಿಲ್ಲಾ ಪಂಚಾಯತಿ ಕಾರ್ಯಕ್ರಮಗಳಿಗಾಗಿ ಒಟ್ಟು ರೂ. 48.493 ಲಕ್ಷಗಳನ್ನು (ರೂ. ನಲವತ್ತೆಂಟು ಲಕ್ಷ ನಲವತ್ತೊಂಬತ್ತು ಸಾವಿರದ ಮುನ್ನೂರು ಮಾತ್ರ) 2007-08ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಿಂದ ರಾಜ್ಯದ ಆರು ಜಿಲ್ಲಾ ಪಂಚಾಯತಿಗಳಿಗೆ ಅನುಬಂಧದಲ್ಲಿ ನಮೂದಿಸಿದಂತೆ ಬಿಡುಗಡೆ ಮಾಡಿದೆ.

ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಹಾಗೂ 2007-08ನೇ ಸಾಲಿನಲ್ಲಿ ಕರ್ನಾಟಕ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಈಗಾಗಲೇ ಕೇಂದ್ರ ಸರ್ಕಾರವು ಹೊರಡಿಸಿರುವ ಹೊಸ ಮಾರ್ಗಸೂಚಿಯನ್ವಯ ಹಾಗೂ ರಾಜ್ಯ ಸರ್ಕಾರಗಳು ಆಗಿಂದಾಗ್ಗೆ ಹೊರಡಿಸಲಾಗುವ ಆದೇಶ, ಸುತ್ತೋಲೆಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

1. ಜಿಲ್ಲಾ ಪಂಚಾಯತಿ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-6-ಜಿಲ್ಲಾ ಪಂಚಾಯತಿಗಳು-04-ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ (ಯೋಜನೆ) (2505-60-196-6-04) 2007-08 (ಯೋಜನೆ)"

ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ 14-7-2005 ಮತ್ತು ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ-1/ಜಡ್‌ಪಿಎ 2007 (ಪಿ-2) ದಿನಾಂಕ 26-4-2007ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ನಿಧಿ-1ಕ್ಕೆ ಜಮೆ ಮಾಡಿಕೊಂಡು ವೆಚ್ಚವನ್ನು ನಿರ್ವಹಣೆ ಮಾಡುವುದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಗ್ರಾಅಪ/421/ಪಿಬಿಎಸ್ 07, ದಿನಾಂಕ 21-9-2007ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

**ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,**
**ಸಿ.ಎಂ. ಶಿರೋಳ್**
ನಿರ್ದೇಶಕರು
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**Annexure to G.O. RDP 15 SGR 2007, Bangalore, Dated 26th September, 2007**
**Statement showing the balance of IIIrd Additionality State share pertaining to 2006-07, released during 2007-08 under SGRY. (Rs. in lakhs)**

| | District | Code No. | State share already released in previous orders dated 21-6-07 & 21-8-07 | State share released in this order (20% ZP share) under H/A 2505-60-196-6-04 |
|---|---|---|---|---|
| 1 | Bangalore (UP | 401 | 54.153 | 5.717 |
| 2 | Kodagu* | 411 | 36.208 | *9.052 |
| 3 | Kolar | 404 | 121.292 | 14.398 |
| 4 | Mysore | 407 | 59.1 | 6.60 |

| | | | | |
|---|---|---|---|---|
| 5 | Uttara Kannada | 416 | 48.418 | 10.392 |
| 6 | Udupi | 457 | 30.48 | 2.334 |
| | **Total** | | **349.651** | **48.493** |

*Stateshare of Rs. 9.052 lakhs now released to be taken to NREGS Account only.

**C.M. SHIROL**
P.R. 1768
Director (SEP)
E/o Joint Secretary to Government
Rural Development & Panchayat Raj Department.

**Forest, Ecology and Environment Secretariat**

**Sub:** Diversion of 27.82 ha. of forest land at Sannakittadahalli and Lingadevarahalli village of Lakkihally reserve forest of Hosadurga range, Chitradurga district for the purpose of extraction of iron ore and manganese ore in favour of M/s Canara Minerals (Private) Limited, Bangalore.

**Read: 1.** Letter No. A5 (1) MNG CR. 86/06-07, dated 28-2-2007 of the Principal Chief Conservator of Forests, Bangalore.
**2.** State Government letter No. FEE 64 FFM 2007, dated 9-3-2007.
**3.** Government of India Ministry of Environment and Forests, Regional Office, South Zone, Bangalore letter No. 4-KRC 310/2007-BAN/534, dated 6th August, 2007.
**4.** Letter No. A5 (1) MNG. CR.86/06-07, dated 10-9-2007 of the Principal Chief Conservator of Forests, Bangalore.
**5.** State Government letter No. FEE 64 FFM 2007, dated 19-9-2007.
**6.** Government of India Ministry of Environment and Forests, Regional Office, South Zone, Bangalore letter No. 4-KRC 316/2007-BAN/867, dated 20th September, 2007.

**Preamble:**

The Principal Chief Conservator of Forests had sent proposel vides his letter dated: 28-2-2007 read at (1) above for diversion of 27.82 ha. of forest land at Sannakittadahalli and Lingadevarahalli village of Lakkihally reserve forest of Hosadurga range, Chitradurga district for the purpose of extraction of iron ore and manganese in favour of M/s Canara Minerals (Private) Limited, Bangalore for a period 20 years co-terminus with the lease granted under MMDR Act, 1957, subject to certain conditions.

The proposal of the Principal Chief Conservator of Forest was recommended to Government of India, Ministry of Environment and Forests, Regional Office, South Zone, Bangalore vide State Government letter dated: 9-3-2007 read at (2) above seeking prior approval of Government of India under section 2 of The Forest (Conservation) Act, 1980.

After careful consideration of the proposal of the State Government, Government of India vide its letter dated: 6th August 2007 read at (3) above has agreed in-principle (Stage-I) subject to the fulfilment of certain conditions.

In compliance of the conditions stipulated by Government of India vide its letter dated: 6th August 2007 the Principal Chief Conservator of Forests vide his letter dated: 10-9-2007 read at (4) above has sent his compliance report. This compliance report was forwarded to Government of India vide State Government letter dated:19-9-2007 read at (5) above.

Government of India vide its letter dated: 20th September 2007 read at (6) above has conveyed its final approval (Stage-II) under Section 2 of The Forest (Conservation) Act, 1980 for diversion of 27.82 ha. of forest land at Sannakittadahalli and Lingadevarahalli village of Lakkihally reserve forest of Hosadurga range, Chitradurga district for the purpose of extraction of iron ore and Manganese in favour of M/s Canara Minerals (Private) Limited, Bangalore for a period of 20 years co-terminus with the lease granted under MMDR Act, 1957, subject to certain conditions. Hence the order.

**Government Order No. FEE 64 FFM 2007, Bangalore, Dated 22nd September, 2007**

In the circumstances explained above, Government is pleased to accord sanction under Section 2 of The Forest (Conservation) Act, 1980 for diversion of 27.82 ha. of forest land in Sannakittadahalli and Lingadevarahalli village of Lakkihally reserve forest of Hosadurga range, Chitradurga district for the purpose of extraction of iron ore and Manganese in favour of M/s Canara Minerals (Private) Limited, Bangalore for a period of 20 years co-terminus with the lease granted under MMDR Act, 1957, subject to the following conditions.

1. Legal status of forest land shall remain unchanged.
2. The demarcation of the proposed forest area shall be carried out by erecting cement concrete pillars duly numbered at an interval of 20 meters at the cost of user agency.

3. Compensatory afforestation shall be raised over identified equivalent non-forest land (27.82 ha.) at Sy.No. 12 of Bukkalarahalli village, Challakere taluk of Chitradurga district, at the cost of user agency. The State Government shall obtain prior permission of Central Gvoernment for change of location and schedule of CA if any.
4. Non-forest land Compensatory afforestation shall be notified by the State Government as Reserved or the State Forest Act within a period of six months and Nodal Officer (FC) shall report the compliance within six months.
5. The funds received from the user agency towards NPV under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003 immediately under intimation to Government of India.
6. No new construction of building for any purpose will be taken up in the forest area diverted for the project.
7. The mining activity in the forest area shall be carried out as per the approved mining plan from the IBM.
8. The user agency shall obtain Environmental Clearance under the Environment (Protection) Act, 1986.
9. The consent of State Pollution Control Board shall be obtained under Air and Water Act before the commencement of mining operation and it shall be renewed every year.
10. Trees shall be felled only when it becomes necessary and in the supervision of State Forest Department.
11. No labour camps shall be established on the forest land.
12. Sufficient firewood shall be provided by the user agency to the labourers at the project cost after purchase from the State Forest Development Corporation.
13. Reclamation plan shall be executed by the user agency from the very first year of mining and an annual report shall be sent to the Nodal Officer and the Regional Office, Bangalore.
14. The user agency shall project the top soil at the project cost.
15. The user agency shall ensure that there should be no damage to the wildlife.
16. The forest land shall not be used for any purpose other than that specified in the proposal.
17. The total forest area utilized for the project shall not exceed 27.82 ha. In case the land is not used for the stipulated purpose, then the area will be resumed by the Forest Department.
18. The forest land as scheduled is diverted for mining purpose under Forest (Conservation) Act 1980 for 20 years co-terminus with MMDR Act 1957.
19. The lessee shall pay usual lease rent and other charges as prescribed by the Government from time to time.
20. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.
21. The lessee shall undertake the afforestation measures in the vacant area of the lease.
22. The lessee shall carryout soil and water conservation measures and other necessary measures as advised by the Forest Department from time to time.
23. The lessee shall undertake to protect rigidly the leased area and forest area surrounding the area upto one Km. from the leased area.
24. The lessee shall not out any trees without prior permission of the Forest Department and all produce of permitted felling shall be handed over to Forest Department under cover of receipt.
25. The lessee shall abide by all the conditions prescribed by Government of India and Government of Karnataka.
26. The lessee shall execute an agreement with the Forest Department binding himself to abide by all usual conditions and terms as per orders of the Government as well as Principal Chief Conservator of Forests.
27. The lessee shall taken-up the planting work on the static dumps during the advance mining operations.
28. In case of violation of agreement conditions, the State Government (Department of Forests, Ecology and Environment) shall have right to suspend the mining activities.
29. The lessee shall reclaim the area 27.82 ha. before handing over to Forest Department.
30. Lessee has to pay extraction cost to Forest Department for felling of trees in the fresh leased area.

31. Lessee has to pay all the dues against him before the end of lease period including reclamation and rehabilitation charges.
32. The user agency shall submit the reclamation and rehabilitation plan after in principal approval, if not submitted so with a undertaking that amount fixed by Forest Department / Director, Department of Mines and Geology / IBM shall be deposited to Forest Department on demand. Review for rehabilitation and reclamation will be carried out on 5th, 10th, 15th and 19th year if found unsatisfactory then the permission granted under Forest (Conservation) Act 1980 will be revoked by the Government of Karnataka.
33. The lessee has to pay the Net Present Value (NPV) fixed by the Government Notification No. FEE 247 FGL 2002, dated 17-1-2004.
34. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

**By order and in the name of the Governor of Karnataka,**

**P.R. KALAVATHI**

P.R.1811

Under Secretary to Government,

Forest, Ecology and Environment Department.

# Infrastructure Development Secretariat

**Sub:** Release of funds of KSIIDC towards 9th draw down of Equity Share Capital of Bangalore International Airport Limited.

**Read: 1.** GO No. IDD 14 DIA 2002, dated 8-7-2004.

**2.** GO No. IDD 41 DIA 2005, dated 22-9-2005

**3.** GO No. IDD 41 DIA 2005 dated 3-1-2006.

**4.** GO No. IDD 41 DIA 2005 (P), dated 27-3-2006.

**5.** GO No. IDD 41 DIA 2005, dated 19-8-2006

**6.** GO No. IDD 41 DIA 2005, dated 25-1-2007

**7.** GO No. IDD 41 DIA 2005, dated 15-5-2007

**8.** GO No. IDD 41 DIA 2005, dated 18-8-07

**9.** Letter No. DGM (IPD) 1898:2007-08,dated 18-9-07.

**Preamble:**

In Government Orders read at Sl.No. 1 to 8 above, Government have released funds to KSIIDC for 1st to 8th draw down of the schedule towards investment in the equity share capital in Bangalore International Airport Limited.

2. The ED, KSIIDC in letter dated 18-9-2007 read at Sl.No. 9 above, has requested to release an amount of Rs. 2.55 crore (Rupees Two crore and Fifty Five lakhs) only towards the 9th draw down contribution of Government of Karnataka to the equity share capital in BIAL, based on the construction budget of Rs. 142.54 crore for the quarter July to September 2007.

**Government Order No. IDD 41 DIA 2005, Bangalore, Dated 6th October, 2007**

After careful examination of the above proposal, Government are pleased to release a sum of Rs. 2.55 crore (Rupees Two crore and Fifty Five lakhs) only to KSIIDC under the Head of Account "5465-01-190-2-01-211-KSIIDC Investment (Plan)" out of the budget provision of Rs. 12.66 crore in 2007-08 being the 9th drawal of equity contribution of Government of Karnataka during 2007-08 to BIAL.

2. The MD, KSIIDC is authorized to draw the amount on a payee's receipt countersigned by the Under Secretary to Government, Infrastructure Development Department.

3. This order is issued with the concurrence of Finance Department vide Endorsement No. FD 1611 Exp-I/07 dated 3-10-2007.

**By order and in the name of the Governor of Karnataka,**

**SHIDRAMAPPA H TALAWAR**

P.R.1812

I/C Under Secretary to Government,

Infrastructure Development Department.

ಇಂಧನ ಸಚಿವಾಲಯ

**ವಿಷಯ:** ಮೆ:: ಜ್ಯೋತಿ ಜಲ ಶಕ್ತಿ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ:: ಗಂಗಾ ಜಲ ಶಕ್ತಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 101 ಎನ್‌ಸಿಇ 2004, ದಿನಾಂಕ: 11.3.2004 ಮತ್ತು 9.9.2004.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 102 ಎನ್‌ಸಿಇ 2004 ದಿನಾಂಕ: 11.3.2004 ಮತ್ತು 9.9.2004.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಐದಭಾವಿ/2007/2024 ದಿನಾಂಕ: 1/10.9.2007.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಆದೇಶಗಳಲ್ಲಿ ಅನುಕ್ರಮವಾಗಿ ಮೆ:: ಜ್ಯೋತಿ ಜಲ ಶಕ್ತಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಲಿಂಗಸೂಗುರು ತಾಲ್ಲೂಕಿನ ಐದಭಾವಿ ಗ್ರಾಮದ ಬಳಿ ಕೃಷ್ಣಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಐದಭಾವಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿ ತದನಂತರ ಸದರಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್ ಸಾಮರ್ಥ್ಯದಿಂದ 24.75 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (2) ರ ಆದೇಶಗಳಲ್ಲಿ ಅನುಕ್ರಮವಾಗಿ ಮೆ:: ಜ್ಯೋತಿ ಜಲ ಶಕ್ತಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಲಿಂಗಸೂಗುರು ತಾಲ್ಲೂಕಿನ ಗುಂತಗೊಲ ಗ್ರಾಮದ ಬಳಿ ಕೃಷ್ಣಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಗುಂತಗೊಲ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿ ತದನಂತರ ಸದರಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್ ಸಾಮರ್ಥ್ಯದಿಂದ 24.75 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಕಂಪನಿಯ ಹೆಸರನ್ನು ಮೆ:: ಜ್ಯೋತಿ ಜಲ ಶಕ್ತಿ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಿಂದ ಮೆ:: ಗಂಗಾ ಜಲ ಶಕ್ತಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಮತ್ತು ಐದಭಾವಿ ಕಿರು ಜಲ ವಿದ್ಯುತ್ ಯೋಜನೆಯನ್ನು ರಾಯಚೂರು ಜಿಲ್ಲೆಯ ಲಿಂಗಸೂಗುರು ತಾಲ್ಲೂಕಿನ ಬಲದಂಡೆಯ ಬದಲಾಗಿ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಬೆಂಚನಗಡ್ಡಿ ಗ್ರಾಮದ ಬಳಿ ಎಡ ದಂಡೆಯಲ್ಲಿ ಅನುಷ್ಠಾನ ಮಾಡಲು ಹಾಗೂ ಐದಭಾವಿ ಕಿರು ಜಲ ವಿದ್ಯುತ್ ಯೋಜನೆಯ ಹೆಸರನ್ನು ಬಸವಣ್ಣ ಕಿರು ಜಲ ವಿದ್ಯುತ್ ಯೋಜನೆ ಎಂದು ಬದಲಾಯಿಸಲು ಸರ್ಕಾರಕ್ಕೆ ಶಿಫಾರಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 346 ಎನ್‌ಸಿಇ 2007, ಬೆಂಗಳೂರು, ದಿನಾಂಕ: 21ನೇ ಸೆಪ್ಟಂಬರ್ 2007.**

ಸರ್ಕಾರವು ಮೆ:: ಜ್ಯೋತಿ ಜಲ ಶಕ್ತಿ ಪ್ರೈವೇಟ್ ಲಿಮಿಟೆಡ್ ಕಂಪನಿಯ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಐದಭಾವಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮತ್ತು 24.75 ಮೆಗಾ ವ್ಯಾಟ್ ಸಾಮರ್ಥ್ಯದ ಗುಂಟಗೋಲ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಗಂಗಾ ಜಲ ಶಕ್ತಿ ಪ್ರೈವೇಟ್ ಲಿಮಿಟೆಡ್ ಎಂಬ ಹೆಸರಿನಲ್ಲಿ ಅನುಷ್ಠಾನ ಮಾಡಲು ಮತ್ತು ಐದಭಾವಿ ಕಿರು ಜಲ ವಿದ್ಯುತ್ ಯೋಜನೆಯನ್ನು ರಾಯಚೂರು ಜಿಲ್ಲೆಯ ಲಿಂಗಸೂಗುರು ತಾಲ್ಲೂಕಿನ ಬಲದಂಡೆಯ ಬದಲಾಗಿ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಬೆಂಚನಗಡ್ಡಿ ಗ್ರಾಮದ ಬಳಿ ಎಡ ದಂಡೆಯಲ್ಲಿ ಅನುಷ್ಠಾನ ಮಾಡಲು ಹಾಗೂ ಐದಭಾವಿ ಕಿರು ಜಲ ವಿದ್ಯುತ್ ಯೋಜನೆಯ ಹೆಸರನ್ನು ಬಸವಣ್ಣ ಕಿರು ಜಲ ವಿದ್ಯುತ್ ಯೋಜನೆ ಎಂದು ಬದಲಾಯಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (1) ಮತ್ತು (2) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1778

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** ಮೆ:: ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ 0.8 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ರದ್ದು ಮಾಡಿ ಮೆ:: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮರು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 120 ಎನ್‌ಸಿಇ 2001 ದಿನಾಂಕ: 30.11.2001.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 66 ಎನ್‌ಸಿಇ 2001 (3) ದಿನಾಂಕ: 29.11.2001.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 357 ಎನ್‌ಸಿಇ 2005 ದಿನಾಂಕ: 1.7.2006.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಯಗಚಿ/2007/1452 ದಿನಾಂಕ: 3.7.2007.
5) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 58 ಎನ್‌ಸಿಇ 2007 ದಿನಾಂಕ: 3.8.2007.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಆದೇಶದಲ್ಲಿ ಮೆ:: ಮಾರುತಿ ಪವರ್ ಜೆನ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಚಿಕ್ಕಬ್ಯಾಡಗೆರೆ ಎಂಬಲ್ಲಿ ಯಗಚಿ ಬ್ರ್ಯಾಂಚ್ ಕೆನಾಲ್‌ಗೆ ಅಡ್ಡಲಾಗಿ 0.8 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2) ರ ಆದೇಶದಲ್ಲಿ ಮೆ:: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಬೇಲೂರು ಟೌನ್ (ಯಗಚಿ ನದಿಯ ನೀರಾವರಿ ಕಾಲುವೆಯ ನೀರಿನಿಂದ) ನಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (3) ರ ಆದೇಶದಲ್ಲಿ ಮೆ:: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಯವರು ಯೋಜನೆ ಹಂಚಿಕೆಯಾಗಿ 4 ವರ್ಷ ಕಳೆದರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ಯೋಜನೆಯ ಹಂಚಿಕೆ ಆದೇಶವನ್ನು ರದ್ದುಪಡಿಸಲಾಗಿತ್ತು.

ಮೇಲೆ ಓದಲಾದ (4) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಒಂದೇ ಸ್ಥಳದಲ್ಲಿ ಎರಡು ಯೋಜನೆಗಳನ್ನು ಹಂಚಿಕೆ ಮಾಡಲು ಅವಕಾಶವಿರುವುದಿಲ್ಲ ಹಾಗೂ ಇದರಿಂದ ಯೋಜನೆಯು ತಾಂತ್ರಿಕವಾಗಿ ವಿಫಲವಾಗುತ್ತದೆ ಎಂದು ತಿಳಿಸಿ ಮೆ:: ಮಾರುತಿ ಪವರ್ ಜೆನ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಿರುವ 0.8 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸಿ ಮೆ:: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮರು ಹಂಚಿಕೆ ಮಾಡುವಂತೆ ಅಭಿಪ್ರಾಯ ನೀಡಿರುತ್ತಾರೆ.

ಮೆ:: ಮಾರುತಿ ಪವರ್ ಜೆನ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಇದೇ ಜಾಗದಲ್ಲಿ 0.8 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆಯು ಹಂಚಿಕೆಯಾಗಿದ್ದು ಒಂದೇ ಜಾಗದಲ್ಲಿ ಎರಡು ಯೋಜನೆಗಳು ಅಭಿವೃದ್ಧಿಪಡಿಸಲು ಕಷ್ಟಸಾಧ್ಯ ಹಾಗೂ ಇದರಿಂದಾಗಿ ರಾಜ್ಯದ ವಿದ್ಯುತ್ ಜಾಲಕ್ಕೆ ಪೂರೈಕೆಯಾಗುವ ವಿದ್ಯುತ್‌ಗೆ ಕೊರತೆ ಉಂಟಾಗುತ್ತದೆ. ಇದರಿಂದ ತಾಂತ್ರಿಕವಾಗಿ ಯೋಜನೆಯು ವಿಫಲವಾಗುತ್ತದೆ ಎಂದು ಮನಗಂಡು ಮೇಲೆ ಓದಲಾದ (5) ರ ನೋಟೀಸಿನಲ್ಲಿ ಮೆ:: ಮಾರುತಿ ಪವರ್ ಜೆನ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಮಾಡುವ ನಿಟ್ಟಿನಲ್ಲಿ ಕಾರಣಗಳನ್ನು ಕೇಳಲಾಗಿತ್ತು. ಸದರಿ ಕಾರಣ ಕೇಳುವ ನೋಟೀಸಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರವು ಸಮಂಜಸವಾಗಿರುವುದಿಲ್ಲವೆಂದು ಸರ್ಕಾರದ ಮಟ್ಟದಲ್ಲಿ ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 58 ಎನ್‌ಸಿಇ 2007, ಬೆಂಗಳೂರು, ದಿನಾಂಕ: 3ನೇ ಸೆಪ್ಟಂಬರ್ 2007.**

ಸರ್ಕಾರಿ ಆದೇಶ ಸಂಖ್ಯೆ: ಡಿಇ 120 ಎನ್‌ಸಿಇ 2001 ದಿನಾಂಕ: 30.11.2001 ರಲಿ ಮೆ:: ಮಾರುತಿ ಪವರ್ ಜೆನ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಚಿಕ್ಕಬ್ಯಾಡಗೆರೆ ಎಂಬಲ್ಲಿ ಯಗಚಿ ಬ್ರ್ಯಾಂಚ್ ಕೆನಾಲ್‌ಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 0.8 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಮೆ:: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಬೇಲೂರು ಟೌನ್ (ಯಗಚಿ ನದಿಯ ನೀರಾವರಿ ಕಾಲುವೆಯ ನೀರಿನಿಂದ) ನಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮರು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಮೆ:: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ ಸಂಬಂಧಪಟ್ಟಂತೆ ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1806

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** M/s Maheshwara Sugars Ltd. ಕಂಪನಿಗೆ 28.8 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್ಇಡಿ/04/ಎಂಎಸ್ಎಲ್/2007/1224 ದಿನಾಂಕ: 24.5.2007.

2) ದಿನಾಂಕ: 13.6.2007 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

ಪ್ರಸ್ತಾವನೆ:

ಮೇಲೆ ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Maheshwara Sugars Ltd. ಕಂಪನಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಚಿಲಕವಾಡಿ ಮತ್ತು ತಗರಪುರ ಗ್ರಾಮಗಳಲ್ಲಿ 28.80 ಮೆಗಾ ವ್ಯಾಟ್ (ಗ್ರಾಸ್) [20.1 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್ ಡ್ಯುರಿಂಗ್ ಸೀಜನ್) ಮತ್ತು 26.6 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್ ಡ್ಯುರಿಂಗ್ ಆಫ್ ಸೀಜನ್)] ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯು ದಿನಾಂಕ: 13.6.2007 ರಂದು ನಡೆದ ಹಂಚಿಕೆ ಸಮತಿ ಸಭೆಯ ಸಹ ವಿದ್ಯುತ್ ಯೋಜನೆ ಪಟ್ಟಿಯ ಕ್ರಮ ಸಂಖ್ಯೆ: 1 ರಲ್ಲಿ ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಎನ್ 207 ಎನ್‌ಸಿಇ 2007, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007.**

ಸರ್ಕಾರವು M/s Maheshwara Sugars Ltd. ಕಂಪನಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಚಿಲಕವಾಡಿ ಮತ್ತು ತಗರಪುರ ಗ್ರಾಮಗಳಲ್ಲಿ 28.80 ಮೆಗಾ ವ್ಯಾಟ್ (ಗ್ರಾಸ್) [20.1 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್ ಡ್ಯುರಿಂಗ್ ಸೀಜನ್) ಮತ್ತು 26.6 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್ ಡ್ಯುರಿಂಗ್ ಆಫ್ ಸೀಜನ್)] ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1) The company shall obtain separate clearance from Karnataka Power Transmission Corporation Limited in respect of evacuation of power.
2) The company shall enter into wheeling and Banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.
3) The company shall obtain necessary statutory clearance wherever required from the respective Departments / Organizations such as Forest Department, Revenue Department, & Karnataka State Pollution Control Board, etc. for both the Sugar Mill and the Power plant.
4) The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1835

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** 10.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಎಸ್.ಎಂ. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಿಂದ ಮೆ:: ಎಸ್.ಎಂ. ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ವರ್ಗಾಯಿಸಿ ಅನುಷ್ಠಾನ ಮಾಡಲು ಅನುಮತಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 511 ಎನ್‌ಸಿಇ 2006 ದಿನಾಂಕ: 17.3.2007.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 257 ಎನ್‌ಸಿಇ 2007 ದಿನಾಂಕ: 12.7.2007.

3) ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ರಂಗನಾಥಸ್ವಾಮಿ–2/2007/2229 ದಿನಾಂಕ: 26.9.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಎಸ್.ಎಂ. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲೂಕಿನ ಶಿವನಸಮುದ್ರಂ ಗ್ರಾಮದ ಹತ್ತಿರ ಗಗನ ಚುಕ್ಕಿ ಜಲಪಾತದ ಕೆಳ ತೊರೆಯಲ್ಲಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2) ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ನಿಂದ 10.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕಂಪನಿಯ ಅಭಿವೃದ್ಧಿದಾರರು ಆಡಳಿತಾತ್ಮಕ ಕಾರಣಗಳಿಂದ ಮೆ:: ಎಸ್.ಎಂ. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಹಂಚಿಕೆ ಮಾಡಲಾಗಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಎಸ್.ಎಂ. ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ವರ್ಗಾಯಿಸಿ ಅನುಷ್ಠಾನ ಮಾಡಲು ಅನುಮತಿಸಬೇಕೆಂದು ಕೋರಿರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 379 ಎನ್‌ಸಿಇ 2007, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2007.**

ಸರ್ಕಾರವು ಮೆ:: ಎಸ್.ಎಂ. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲೂಕಿನ ಶಿವನಸಮುದ್ರಂ ಗ್ರಾಮದ ಹತ್ತಿರ ಗಗನ ಚುಕ್ಕಿ ಜಲಪಾತದ ಕೆಳ ತೊರೆಯಲ್ಲಿ ಹಂಚಿಕೆ ಮಾಡಲಾಗಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಎಸ್.ಎಂ. ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ವರ್ಗಾಯಿಸಿ ಅನುಷ್ಠಾನ ಮಾಡಲು ಅನುಮತಿ ನೀಡಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1836

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಾವೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಆರ್ಮುಗಮ್ ರಿನೆವೆಬಲ್ ಎನರ್ಜಿ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಿಂದ ಮೆ:: ಆರ್ಮುಗಮ್ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ವರ್ಗಾಯಿಸಿ ಅನುಷ್ಠಾನ ಮಾಡಲು ಅನುಮತಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 52 ಎನ್‌ಸಿಇ 2006 ದಿನಾಂಕ: 17.3.2007.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 256 ಎನ್‌ಸಿಇ 2007 ದಿನಾಂಕ: 12.7.2007.
3) ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ ಕಾವೇರಿ/2007/2230 ದಿನಾಂಕ: 26.9.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಆರ್ಮುಗಮ್ ರಿನೆವೆಬಲ್ ಎನರ್ಜಿ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಶಿಂಷಾಪುರ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಾವೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2) ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 5.00 ಮೆಗಾ ವ್ಯಾಟ್‌ನಿಂದ 24.75 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕಂಪನಿಯ ಅಭಿವೃದ್ಧಿದಾರರು ಆಡಳಿತಾತ್ಮಕ ಕಾರಣಗಳಿಂದ ಮೆ:: ಆರ್ಮುಗಮ್ ರಿನೆವೆಬಲ್ ಎನರ್ಜಿ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಹಂಚಿಕೆ ಮಾಡಲಾಗಿರುವ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಾವೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಆರ್ಮುಗಮ್ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ವರ್ಗಾಯಿಸಿ ಅನುಷ್ಠಾನ ಮಾಡಲು ಅನುಮತಿಸಬೇಕೆಂದು ಕೋರಿರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 380 ಎನ್‌ಸಿಇ 2007, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2007.**

ಸರ್ಕಾರವು ಮೆ:: ಆರ್ಮುಗಮ್ ರಿನೆವೆಬಲ್ ಎನರ್ಜಿ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಶಿಂಷಾಪುರ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾಗಿರುವ 24.75

ಮೆಗಾ ವ್ಯಾಟ್ ಸಾಮರ್ಥ್ಯದ ಕಾವೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಆರ್ಮುಗಮ್ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ವರ್ಗಾಯಿಸಿ ಅನುಷ್ಠಾನ ಮಾಡಲು ಅನುಮತಿ ನೀಡಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1837

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** ಮೆ:: ಭರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಯ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಮಾಧವಮಂತ್ರಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 187 ಎನ್‌ಸಿಇ 2001 ದಿನಾಂಕ: 30.11.2001.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಮಾಧವಮಂತ್ರಿ–2/2006/748 ದಿನಾಂಕ: 14.3.2007.
3) ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 176 ಎನ್‌ಸಿಇ 2006 ದಿನಾಂಕ: 23.7.2007.
4) ಅಭಿವೃದ್ಧಿದಾರರ ಪತ್ರ ಸಂಖ್ಯೆ: ಬಿಪಿಸಿಎಲ್/ಟಿಎಎಲ್/2007 ದಿನಾಂಕ: 30.7.2007.
5) ಕಾವೇರಿ ನೀರಾವರಿ ನಿಗಮ ನಿಯಮಿತದ ಪತ್ರ ಸಂಖ್ಯೆ: ಕಾನೀನಿ/ತಾಂ–10/ಡಿ&ಐ–04/07–08 ದಿನಾಂಕ: 10.9.2007.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಆದೇಶದಲ್ಲಿ ಮೆ:: ಭರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಟಿ. ನರಸೀಪುರ ತಾಲೂಕಿನ ತಲಕಾಡು ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ ಮಾಧವಮಂತ್ರಿ ಅಣೆಕಟ್ಟೆಯ ಎಡ ಭಾಗದಲ್ಲಿ (ಟೊ ದಲ್ಲಿ) 3.00 ಮೆಗಾ ವ್ಯಾಟ್ ಸಾಮರ್ಥ್ಯದ ಮಾಧವಮಂತ್ರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸ್ಥಳೀಯರಾಗಿರುವ ಮಾಧವಮಂತ್ರಿ ನಾಲಾ ಹಿತ ರಕ್ಷಣಾ ಸಮಿತಿಯವರು ಈ ಯೋಜನೆಯನ್ನು ಅನುಷ್ಠಾನಗೊಳಿಸಿದ್ದಲ್ಲಿ ವ್ಯವಸಾಯಕ್ಕೆ ತೊಂದರೆಯಾಗುವುದು ಹಾಗೂ ಅಣೆಕಟ್ಟಿಗೆ ಧಕ್ಕೆಯಾಗುವ ಸಂದರ್ಭ ಇರುವುದರಿಂದ ಮಾಧವಮಂತ್ರಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸಲು ಕೋರಿರುವ ಹಿನ್ನೆಲೆಯಲ್ಲಿ ಹಂಚಿಕೆ ರದ್ದು ಪಡಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಅಂಶವನ್ನು ಪರಿಗಣಿಸಿ ಮೇಲೆ ಓದಲಾದ (3)ರ ನೋಟೀಸಿನಲ್ಲಿ ಮೆ:: ಭರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿ ಅಭಿವೃದ್ಧಿದಾರರಿಗೆ ಕಾರಣವನ್ನು ಕೇಳಲಾಗಿತ್ತು. ಸದರಿ ನೋಟೀಸಿಗೆ ತಮ್ಮ ಸಮಜಾಯಿಷಿಯನ್ನು ನೀಡಿ ಅಭಿವೃದ್ಧಿದಾರರು ಮೇಲೆ ಓದಲಾದ (4)ರ ಪತ್ರದಲ್ಲಿ ವಿವರಗಳನ್ನು ನೀಡಿರುತ್ತಾರೆ. ಸದರಿ ಸಮಜಾಯಿಷಿಯ ಮೇಲೆ ಕರ್ನಾಟಕ ನೀರಾವರಿ ನಿಗಮ ನಿಯಮಿತವು ಮೇಲೆ ಓದಲಾದ (5)ರ ಪತ್ರದಲ್ಲಿ ತನ್ನ ಅಭಿಪ್ರಾಯವನ್ನು ನೀಡಿ ಮಾಧವಮಂತ್ರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಕೈಬಿಡಲು ಸೂಚಿಸಿರುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 176 ಎನ್‌ಸಿಇ 2006, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2007.**

ಸರ್ಕಾರವು ಆದೇಶ ಸಂಖ್ಯೆ: ಡಿಇ 187 ಎನ್‌ಸಿಇ 2001 ದಿನಾಂಕ: 30.11.2001 ರಲ್ಲಿ ಮೆ:: ಭರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಟಿ. ನರಸೀಪುರ ತಾಲೂಕಿನ ತಲಕಾಡು ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ ಮಾಧವಮಂತ್ರಿ ಅಣೆಕಟ್ಟಿನ ಎಡ ಭಾಗದಲ್ಲಿ (ಟೊ ದಲ್ಲಿ) ಹಂಚಿಕೆ ಮಾಡಲಾಗಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಮಾಧವಮಂತ್ರಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1853

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** M/s Sri Maruthi Power Gen India Private Limited ಕಂಪನಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಯೆಡಕುಮೆರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕ್ರೆಡಲ್/06/ಯೆಡಕುಮಾರಿ/2007/1347 ದಿನಾಂಕ: 12.6.2007.

2) ದಿನಾಂಕ: 13.6.2007 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Sri Maruthi Power Gen India Private Limited ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲೂಕಿನ ಯೆಡಕುಮೆರಿ ಗ್ರಾಮದ ಹೊಂಗಡಹಳ್ಳ ನದಿಯ ಬಲ ದಂಡೆಯಲ್ಲಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಯೆಡಕುಮೆರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಓದಲಾದ (2) ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 24 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಎನ್ 227 ಎನ್‌ಸಿಇ 2007, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007.**

ಸರ್ಕಾರವು M/s Sri Maruthi Power Gen India Private Limited ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲೂಕಿನ ಯೆಡಕುಮೆರಿ ಗ್ರಾಮದ ಹೊಂಗಡಹಳ್ಳ ನದಿಯ ಬಲ ದಂಡೆಯಲ್ಲಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಯೆಡಕುಮೆರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದ0ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ ನೀರಾವರಿ/ ಕುಡಿಯುವ ನೀರಿನ ಯೋಜನೆಗಳು/ ಸರ್ಕಾರಿ ಯೋಜನೆಗಳು ಬಂದಲ್ಲಿ ಸದರಿ ಯೋಜನೆಗಳಿಗೆ ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1854

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** M/s Dishaa Power Corporation Pvt. Ltd. ಕಂಪನಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಪೆರ್ಡೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕ್ರೆಡಲ್/06/ಬಲ್ಯ/2007/1015 ದಿನಾಂಕ: 16.4.2007.
2) ದಿನಾಂಕ: 13.6.2007 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Dishaa Power Corporation Pvt. Ltd. ಕಂಪನಿಗೆ ಉಡುಪಿ ಜಿಲ್ಲೆಯ ಪೆರ್ಡೂರು ಗ್ರಾಮದ ಮಡಿಸಾಲ ಹೊಳೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಪೆರ್ಡೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 13 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಎನ್ 203 ಎನ್‌ಸಿಇ 2007, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007.**

ಸರ್ಕಾರವು M/s Dishaa Power Corporation Pvt. Ltd. ಕಂಪನಿಗೆ ಉಡುಪಿ ಜಿಲ್ಲೆಯ ಪೆರ್ಡೂರು ಗ್ರಾಮದ ಮಡಿಸಾಲ ಹೊಳೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಪೆರ್ಡೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ/ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1855 **ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: ಶರಣ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಾದಗಿರ್ ಕಿರು ಜಲ ವಿದ್ಯುತ್ ಯೋಜನೆಯನ್ನು 6.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಂಇ 293 ಎನ್‌ಸಿಇ 2004 ದಿನಾಂಕ: 9.9.2004.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಯಾದಗಿರ್/2007/2279 ದಿನಾಂಕ: 5.10.2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಶರಣ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಯಾದಗೀರ್ ತಾಲೂಕಿನ ಭೀಮಾ ನದಿಗೆ ಕಟ್ಟುತ್ತಿರು ಬ್ಯಾರೆಜಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಾದಗಿರ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ಕೋರಿರುವ ಹಿನ್ನೆಲೆಯಲ್ಲಿ ಯಾದಗಿರ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್ ನಿಂದ 6.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 298 ಎನ್‌ಸಿಇ 2007, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್ 2007.**

ಸರ್ಕಾರವು ಮೆ:: ಶರಣ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಯಾದಗೀರ್ ತಾಲೂಕಿನ ಭೀಮಾ ನದಿಗೆ ಕಟ್ಟುತ್ತಿರುವ ಬ್ಯಾರೆಜಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಾದಗಿರ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 6.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1856

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: ದಿಶಾ ಪವರ್ ಕಾರ್ಪೊರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 3.6 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಮತ ಕಿರು ಜಲ ವಿದ್ಯುತ್ ಯೋಜನೆಯನ್ನು 4.8 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 5 ಎನ್‌ಸಿಇ 2005 ದಿನಾಂಕ: 3.1.2005.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 81 ಎನ್‌ಸಿಇ 2007 ದಿನಾಂಕ: 5.3.2007.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಹೊಂಗಡದಹಳ್ಳಿ/2007/1915 ದಿನಾಂಕ: 22.8.2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ಹೊಸಮತ ಗ್ರಾಮದ ಬಳಿ ಗುಂಡ್ಯ ನದಿಗೆ ಅಡ್ಡಲಾಗಿ 3.6 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಮತ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಮೆ:: ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ:: ದಿಶಾ ಪವರ್ ಕಾರ್ಪೊರೇಷನ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ 3.6 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಮತ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ಕೋರಿರುವ ಹಿನ್ನೆಲೆಯಲ್ಲಿ ಹೊಸಮತ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 3.6 ಮೆಗಾ ವ್ಯಾಟ್ ನಿಂದ 4.8 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 377 ಎನ್‌ಸಿಇ 2007, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್ 2007.**

ಸರ್ಕಾರವು ಮೆ:: ದಿಶಾ ಪವರ್ ಕಾರ್ಪೊರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ಹೊಸಮತ ಗ್ರಾಮದ ಬಳಿ ಗುಂಡ್ಯ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 3.6 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಮತ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.8 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1857

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** M/s Parvathavardhini Pvt. Ltd. ಕಂಪನಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ತಾನಿಕೊಡೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕ್ರೆಡಲ್/06/ತಾನಿಕೊಡೆ/2006/527 ದಿನಾಂಕ: 27.2.2007.

2) ದಿನಾಂಕ: 13.6.2007 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Parvathavardhini Pvt. Ltd. ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲೂಕಿನ ತಾನಿಕೊಡೆ ಗ್ರಾಮದ ತುಂಗಾ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ತಾನಿಕೊಡೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2) ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 1 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಎನ್ 109 ಎನ್‌ಸಿಇ 2007, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007.**

ಸರ್ಕಾರವು M/s Parvathavardhini Pvt. Ltd. ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲೂಕಿನ ತಾನಿಕೊಡೆ ಗ್ರಾಮದ ತುಂಗಾ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ತಾನಿಕೊಡೆ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದ0ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ ನೀರಾವರಿ/ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1858

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** M/s Varasiddi Vinayaka Energy Pvt., Ltd. ಕಂಪನಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿತ್ತೂರ್–1 ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕ್ರೆಡಲ್/06/ಕಿತ್ತೂರ್–1/2007/1320 ದಿನಾಂಕ: 8.6.2007.
2) ದಿನಾಂಕ: 13.6.2007 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Varasiddi Vinayaka Energy Pvt., Ltd. ಕಂಪನಿಗೆ ಬೆಳಗಾಂ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಕೆಂಪಟ್ಟಿ ಗ್ರಾಮದ ಬಳಿ ಮಾರ್ಕಾಂಡೇಯ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿತ್ತೂರ್–1 ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2) ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 17 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 218 ಎನ್‌ಸಿಇ 2007, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007.**

ಸರ್ಕಾರವು M/s Varasiddi Vinayaka Energy Pvt., Ltd. ಕಂಪನಿಗೆ ಬೆಳಗಾಂ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಕೆಂಪಟ್ಟಿ ಗ್ರಾಮದ ಬಳಿ ಮಾರ್ಕಾಂಡೇಯ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿತ್ತೂರ್–1 ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು

(ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದರ0ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ ನೀರಾವರಿ/ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1859

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: V. Pram Power Co. (P) Limited ಕಂಪನಿಯವರಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ದೇವರಾಯ ಅಣೆಕಟ್ಟು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 28 ಎನ್‌ಸಿಇ 1996 (25) ದಿನಾಂಕ: 24.7.1996.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 383 ಎನ್‌ಸಿಇ 2005 ದಿನಾಂಕ: 16.12.2005.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ವಿ.ಪ್ರಾ./2007/1861 ದಿನಾಂಕ: 21.8.2007.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ:: V. Pram Power Co. (P) Limited ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಮಜ್ಜಿಗೆಪುರ ಗ್ರಾಮದ ಹತ್ತಿರ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಸದರಿ ಕಂಪನಿಗೆ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ : 01.1.2006ರಿಂದ ಮುಂದಿನ ಎರಡು ವರ್ಷದವರೆಗೆ ವಿಸ್ತರಿಸಲಾಗಿತ್ತು, ಸದರಿ ಕಾಲಾವಕಾಶವು ದಿನಾಂಕ: 31.12.2007ಕ್ಕೆ ಮುಕ್ತಾಯವಾಗುತ್ತದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: V. Pram Power Co. (P) Limited ಕಂಪನಿಗೆ ರಾಜ್ಯ ಮಟ್ಟದ ಏಕ ಗವಾಕ್ಷಿಯಿಂದ (State Level Single Window) ಅನುಮೋದನೆಗಾಗಿ ಇನ್ನು ಎರಡು ವರ್ಷಗಳ ಕಾಲಾವಕಾಶಬೇಕಾಗಿರುವುದರಿಂದ ಸದರಿ ಯೋಜನೆಗೆ ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಕಾಲಾವಕಾಶವನ್ನು ಮುಂದಿನ 2 ವರ್ಷಗಳ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 300 ಎನ್‌ಸಿಇ 2007, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2007.**

ಮೆ:: V. Pram Power Co. (P) Limited ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಮಜ್ಜಿಗೆಪುರ ಗ್ರಾಮದ ಹತ್ತಿರ 0.5 ಮೆಗಾ ವ್ಯಾಟ್ ಸಾಮರ್ಥ್ಯದ ದೇವರಾಯ ಅಣೆಕಟ್ಟು ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 01.1.2008 ರಿಂದ ಮುಂದಿನ 2 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1960

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**FINANCE SECRETARIAT**

**No. FD 41 TAR 05, Bangalore, dated:17th November 2007**

**CIRCULAR**

**Subject :** Introduction of scheme of dematerialization of TDS Certificates from 01.04.2008.

According to the provisions of Section 206 of the Income Tax Act read with rules 36A and 37 of the Income Tax Rules, the prescribed person in the case of every office of Government responsible for deducting tax under Section 192 from salaries shall after the end of each financial year prepare and deliver by 30th June following the financial year, an annual return of deduction of tax to the designated/concerned Assessing Officer. Under the existing procedure, the Drawing & Disbursing Officers after making TDS deductions are required to issue necessary TDS Certificates (Form 16/16-A as the case may be) to enable the tax payers to submit the same with their tax returns.

**New procedure:**

(i) The Finance Act 2004 has made necessary changes in the Income Tax Act for introduction of the scheme for dematerialization of TDS certificates with effect from 01.04.2008;

(ii) As per the new procedure, all deductors including government deductors will have to file quarterly TDS returns giving deductee wise break up of all deductions made by them. These returns will be filed on electronic format with Tax Information Network (TIN). TIN will verify particulars relating to deposit of TDS given in these quarterly TDS returns with the corresponding information of TDS uploaded to TIN on TDS book adjustment form in the case of Government deductors. In case of State Government deductors respective Accountants General compile the accounts of the payments made by the State Treasuries and send a Demand Draft (DD) with treasury wise details for the amount of income tax deducted at source by State Government Drawing & Disbursing Officers to the Zonal Accounts Officers (ZAO) for depositing the same to Government Account. The ZAOs will upload particulars of TDS deducted by the State Government Drawing & Disbursing Officers to TIN on the basis of Drawing & Disbursing Officer-wise details of TDS as provided by the Accountants General.

(iii) The income tax department will post deductee-wise particulars of TDS to the ledger accounts of each deductee identified by their PAN. After the close of the year TIN will issue an annual statement of TDS to each deductee giving full particulars of all taxes deducted on his behalf by different deductors. The new system is to ensure that all taxes deducted are reconciled with the credits claimed by different deductees in their respective returns of income tax. The system enables to eliminate possibility of bogus TDS certificate and related TDS frauds. This will also enable eventual elimination of the issue of TDS certificates by deductors and the requirement on the part of deductees to enclose the same with their respective returns of income leading to dematerialization of TDS certificates.

The new procedure comes into effect from 01.04.2008 and all the requirements involved for its implementation by the deductees, Drawing & Disbursing Officers and treasuries have to be well in place before the system comes in to force. The action points for implementation at different levels are detailed below:

**(1). Deductee:** As per Section 139-A (5B), it is mandatory for persons deducting tax at source to quote Permanent Account Number (PAN) of the persons from whose income, tax has been deducted in the statement furnished under Section 192 or certificates furnished under Section 203. Each deductee not having PAN is therefore required to apply for allotment of PAN in Form No.49A and intimate the same to his/her Drawing & Disbursing Officer for incorporation in Form 24Q.

**(2). Deductor (Drawing & Disbursing Officer):** According to the provisions of Section 203A of the Income Tax Act, it is mandatory for all persons responsible for deducting tax at source to obtain and quote the tax deduction account number (TAN) in the challans, TDS certificates, returns etc. TAN is a 10-digit alpha-numeric number issued by the Assessing Officer of the Income Tax Department. The application in Form 49B is to be filed at any of the TIN facilitation centre meant for receipt of e-TDS returns. NSDL will ensure intimation of new TAN at the address indicated in the Form 49B against acknowledgement. If a person fails to comply with the provisions of Section 203A he will be liable to pay by way of penalty under Section 272BB a sum of Rs.10,000/-.

(a). The deductor responsible for deduction of tax at source under various sections of the Income Tax Act has to file deductee-wise quarterly returns in Form 24Q and 26Q electronically to TIN as per the following schedule:

| Quarter Ending | Due Date |
|---|---|
| 30th June | 15th July |
| 30th September | 15th October |
| 31st December | 15th January |
| 31st March | 15th June |

The type of Forms to be used is as follows:

| Nature | Form |
|---|---|
| TDS from salary | 24Q along with Annexure I, II and III |
| TDS from payment other than salary | 26Q along with Annexure |

The Forms can be downloaded from the website http://incometaxindia.gov.in or http://tin.nsdl.com. The mandatory items in the data structure for the quarterly statement in Form 24Q to be filled by Drawing & Disbursing Officers have to be furnished in full failing which the return will not be uploaded. All columns are mandatory in Form 26Q and the return will not be uploaded unless all the columns are filled up.

(b). e-TDS returns can be filed at any of the TIN facilitation centre opened by the e-TDS. The address of these centres is available at the website http://incometaxindia.gov.in or at http://tin.nsdl.com.

**(3). Accountant General:** The Accountant General will furnish every month treasury wise break up of TDS along with cheque/DD to ZAOs. The Accountant General will also provide quarterly Drawing & Disbursing Officer wise information regarding TDS to the ZAO in soft copy for uploading to TIN. The data in the softcopy provided to the ZAO by the Accountant General should match the amount of cheque/DD drawn earlier in favour of ZAO. The deductee wise quarterly return in Form 24Q and 26Q will be furnished

to income tax department by the Drawing & Disbursing Officers of State Government. So far as reconciliation is concerned, the Drawing & Disbursing Officer has to initiate action to reconcile the amount of tax deducted at source with district/taluk treasury officer who is the bill passing authority in the State Government.

Any mismatch between TDS book adjustment form and Form 24Q/26Q reported by NSDL to ZAO will be rectified by the Office of the Accountant General (A&E). The ZAO will send the report of the mismatch to the Accountant General (A&E) on the same day on which it is received from NSDL. If the error is on the part of the Drawing & Disbursing Officer, the Accountant General will furnish details to the Drawing & Disbursing Officer within five days of receipt of mismatch report from the ZAO to make necessary corrections in Form 24Q/26Q. The Drawing & Disbursing Officer will send a correction statement in the prescribed electronic format to the TIN within ten days of receipt of details of mismatch from the Accountant General.

All the Drawing & Disbursing Officers in the State are therefore to gear up for the revised procedures and have all the requirements in place before 01.04.2008. The time schedule prescribed may be strictly adhered to. Any assistance on e-TDS can be obtained from NSDL which has set up a dedicated Support Desk to assist the deductors and may be contacted at National Securities Depository Limited, Trade World, 'A' Wing, 4th Floor, Kamala Mills Compound, Senapati Bapat Marg, Lower Parel, Mumbai-400013 and for any queries, the deductors may e-mail to tininfo@nsdl.co.in.

**DARPAN JAIN**

PR. 2057

Deputy Secretary to Government (B&R)
Finance Department.

**ಆರ್ಥಿಕ ಸಚಿವಾಲಯ**

**ವಿಷಯ :** ನಿವೃತ್ತಿ ವೇತನ ಪಡೆಯಲು ಇರುವ ಕನಿಷ್ಠ ಅರ್ಹತಾದಾಯಕ ಸೇವೆಯ ಪರಿಷ್ಕರಣೆ ಹಾಗೂ ಪಿಂಚಣಿ ಸೌಲಭ್ಯಗಳನ್ನು ಲೆಕ್ಕ ಹಾಕಲು ಜಾರಿ ಇರುವ ಉಪಲಬ್ದಿ ಪರಿಷ್ಕರಣೆ.

**ಓದಲಾಗಿದೆ :**
1. ದಿನಾಂಕ 30–9–2003ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 06 ಸನಿತಿ 2003.
2. ದಿನಾಂಕ 8–9–2006ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 06 ಸನಿತಿ 2003.
3. ದಿನಾಂಕ 6–6–2007ರ ಸರ್ಕಾರಿ ಆದೇಶ ಸಂಖ್ಯೆ: ಆಇ (ವಿಶೇಷ) 03 ಪಿಎನ್ 2001(1).

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಬರ ಪರಿಹಾರ ಕಾರ್ಯಗಳಿಗೆ ಹಣ ಒದಗಿಸುವ ಉದ್ದೇಶದೊಂದಿಗೆ ಆಡಳಿತಾತ್ಮಕ ವೆಚ್ಚಗಳನ್ನು ಕಡಿತಗೊಳಿಸಿ, ಸಂಪನ್ಮೂಲ ಕ್ರೋಢೀಕರಿಸುವ ಉದ್ದೇಶದಿಂದ ಸರ್ಕಾರವು ಹಲವಾರು ಮಿತವ್ಯಯ ಕಾರ್ಯಕ್ರಮಗಳನ್ನು ಜಾರಿಗೊಳಿಸಿದ್ದು, ಅವುಗಳಲ್ಲಿ ಸರ್ಕಾರಿ ನೌಕರರಿಗೆ ಸಂಬಂಧಿಸಿದ ಪಿಂಚಣಿ ಸುಧಾರಣೆಗಳು ಸೇರಿದ್ದವು. ಈ ಸುಧಾರಣೆಗಳಲ್ಲಿ ನಿವೃತ್ತಿ ವೇತನವನ್ನು ಪಡೆಯಲು ಇರುವ ಕನಿಷ್ಠ ಅರ್ಹತಾದಾಯಕ ಸೇವೆಯನ್ನು 10 ವರ್ಷಗಳ ಬದಲಿಗೆ 15 ವರ್ಷಗಳಿಗೆ ಪರಿಷ್ಕರಿಸಿ ಮತ್ತು ವಿವಿಧ ನಿವೃತ್ತಿ ಮತ್ತು ಮರಣ ಸೌಲಭ್ಯಗಳು ಮತ್ತು ಕುಟುಂಬ ಪಿಂಚಣಿಗಳನ್ನು ಲೆಕ್ಕ ಹಾಕುವುದಕ್ಕಾಗಿ, ಸರ್ಕಾರಿ ನೌಕರನು ತನ್ನ ನಿವೃತ್ತಿ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನವನ್ನು ಉಪಲಬ್ದಿಯೆಂದು ಪರಿಗಣಿಸುವ ಬದಲಿಗೆ ಆತನು ಸರ್ಕಾರಿ ಸೇವೆಯಲ್ಲಿ ಇದ್ದ ನಿಕಟ ಪೂರ್ವದ 10 ತಿಂಗಳ ಅವಧಿಯಲಿ ಗಳಿಸಿದ ಮೂಲ ವೇತನದ ಸರಾಸರಿ ಮೊಬಲಗನ್ನು ಉಪಲಬ್ದಿಯಾಗಿ ಪರಿಗಣಿಸಬೇಕು ಎಂದು ಆದೇಶಿಸಲಾಗಿತ್ತು.

ನಂತರ, ಸರ್ಕಾರವು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಯೋ ನಿವೃತ್ತಿ ವೇತನವನ್ನು ಪಡೆಯಲು ಅಗತ್ಯ ಇರುವ ಕನಿಷ್ಠ ಅರ್ಹತಾದಾಯಕ ಸೇವೆಯನ್ನು 15 ವರ್ಷಗಳಿಗೆ ಹೆಚ್ಚಿಸಿ ನಿಗದಿಪಡಿಸಿರುವುದನ್ನು ಪರಿಷ್ಕರಿಸಿ 10 ವರ್ಷಗಳ ಅರ್ಹತಾದಾಯಕ ಸೇವೆಯೆಂದು ನಿಗದಿಗೊಳಿಸಿ ಭವಿಷ್ಯಾನ್ವಯವಾಗಿ ಜಾರಿಗೊಳಿಸಿದೆ. ರಾಜ್ಯ 5ನೇ ವೇತನ ಆಯೋಗವು ನೀಡಿದ ವರದಿಯಲ್ಲಿ ನಿವೃತ್ತಿ ಸೌಲಭ್ಯಗಳ ಬಗ್ಗೆ ಮಾಡಲಾಗಿರುವ ಶಿಫಾರಸ್ಸುಗಳನ್ನು ಪರಿಗಣಿಸಿ ಸರ್ಕಾರವು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನಿವೃತ್ತಿ ಸೌಲಭ್ಯಗಳ ಪರಿಷ್ಕರಣೆ ಮತ್ತು ಇತರ ಸಂಬಂಧಿತ ವಿಚಾರಗಳ ಬಗ್ಗೆ ಆದೇಶವನ್ನು ಹೊರಡಿಸಿದ್ದು, ಈ ಆದೇಶದಲ್ಲಿ ಇತರ ಅಂಶಗಳ ಜೊತೆಗೆ ವಿವಿಧ ನಿವೃತ್ತಿ ಮತ್ತು ಮರಣ ಸೌಲಭ್ಯ ಮತ್ತು ಕುಟುಂಬ ಪಿಂಚಣಿಗಳನ್ನು ಲೆಕ್ಕ ಹಾಕುವುದಕ್ಕಾಗಿ ಉಪಲಬ್ದ ಪದಕ್ಕೆ ಸರ್ಕಾರಿ ನೌಕರನು ತನ್ನ ನಿವೃತ್ತಿ / ಮರಣ ಸಮಯದಲ್ಲಿ ಹೊಂದಿದ ಹುದ್ದೆಗೆ ಅನ್ವಯಿಸಲಾದ ವೇತನ ಶ್ರೇಣಿಯ ಮೂಲ ವೇತನ ಎಂದು ಅರ್ಥೈಯಿಸಬೇಕೆಂದು ಆದೇಶಿಸಲಾಗಿದೆ. ಈ ಆದೇಶವು ದಿನಾಂಕ: 1–7–2005 ರಿಂದಲೇ ಜಾರಿಗೆ ಬರುತ್ತದೆ.

ನಿವೃತ್ತಿ, ವೇತನ ಗಳಿಸಲು ಅಗತ್ಯವಿರುವ ಕನಿಷ್ಠ ಅರ್ಹತಾದಾಯಕ ಸೇವೆಯನ್ನು 15 ವರ್ಷಗಳಿಂದ 10 ವರ್ಷಗಳಿಗೆ ಇಳಿಸಿರುವ ಸೌಲಭ್ಯವು ದಿನಾಂಕ: 1–9–2003 ರಿಂದ 8–9–2006 ರ ಅವಧಿಯಲ್ಲಿ ನಿವೃತ್ತರಾದವರಿಗೆ ಲಭ್ಯವಾಗುವುದಿಲ್ಲ. ಹಾಗೆಯೇ ವಿವಿಧ ನಿವೃತ್ತಿ ಸೌಲಭ್ಯಗಳನ್ನು ಲೆಕ್ಕ ಹಾಕಲು ಅಂತಿಮ ವೇತನವನ್ನು ಉಪಲಬ್ದಿಯೆಂದು ಪರಿಗಣಿಸಬೇಕೆಂಬ

ಸೂತ್ರವು ದಿನಾಂಕ 1–9–2003 ರಿಂದ 30–6–2005ರ ನಡುವೆ ನಿವೃತ್ತರಾದವರಿಗೆ ಅನ್ವಯಿಸುವುದಿಲ್ಲ. ಈ ಸೌಲಭ್ಯಗಳಿಂದ ವಂಚಿತರಾದವರಿಗೂ ಸೌಲಭ್ಯಗಳನ್ನು ವಿಸ್ತರಿಸಬೇಕೆಂದು ಬಂದ ಮನವಿಗಳ ಹಿನ್ನೆಲೆಯಲ್ಲಿ ಹಾಗೂ ಏಕ ರೂಪತೆಯನ್ನು ಕಾಯ್ದುಕೊಳ್ಳಬೇಕು ಎದಂಬ ದೃಷ್ಟಿಯಿಂದ ಈ ಸೌಲಭ್ಯಗಳನ್ನು ದಿನಾಂಕ 1–9–2003 ರಿಂದ ಅನ್ವಯವಾಗುವಂತೆ ಪೂರ್ವಸ್ಥಿತಿಗೆ ತರುವ ಅಗತ್ಯತೆಯನ್ನು ಪರಿಗಣಿಸಿ ಕೆಳಕಂಡ ಆದೇಶಗಳನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 06 ಎಸ್‌ಆರ್‌ಎ 2003, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2007**

ನಿವೃತ್ತಿ ಸೌಲಭ್ಯವನ್ನು ಪಡೆಯಲು ಅಗತ್ಯವಿರುವ ಕನಿಷ್ಠ ಅರ್ಹತಾದಾಯಕ ಸೇವೆಯ ನಿಬಂಧನೆಯನ್ನು 15 ವರ್ಷಗಳಿಂದ 10 ವರ್ಷಗಳಿಗೆ ಮತ್ತು ನಿವೃತ್ತಿ ವೇತನ ಹಾಗೂ ಪಿಂಚಣಿ ಸೌಲಭ್ಯಗಳನ್ನು ಲೆಕ್ಕ ಹಾಕಲು ಸರ್ಕಾರಿ ನೌಕರನ ನಿವೃತ್ತಿ / ಮರಣದ ನಿಕಟ ಪೂರ್ವದ 10 ತಿಂಗಳ ಸರಾಸರಿ ವೇತನವನ್ನು ಉಪಲಬ್ಧಿಯೆಂದು ಪರಿಗಣಿಸುವ ಬದಲಿಗೆ ಹಿಂದೆ ಜಾರಿಯಲ್ಲಿದ್ದ ಪದ್ದತಿಯಂತೆ ನೌಕರನು ತನ್ನ ನಿವೃತ್ತಿ / ಮರಣದ ಸಮಯದಲ್ಲಿ ಹೊಂದಿದ್ದ ಹುದ್ದೆಗೆ ಅನ್ವಯಿಸಲಾದ ವೇತದನ ಶ್ರೇಣಿಯ ಮೂಲ ವೇತನವನ್ನು ಉಪಲಬ್ಧಿಯೆಂದು ಪರಿಗಣಿಸುವ ಸೂತ್ರವನ್ನು, ದಿನಾಂಕ 1–9–2003 ರಿಂದ ಅನ್ವಯವಾಗುವಂತೆ ಕಾಲ್ಪನಿಕವಾಗಿ ಪೂರ್ವ ಸ್ಥಿತಿಗೆ ತರಲಾಗಿದೆ (restored notionally).

2. ಈ ಕಾರಣದಿಂದ ಲಭ್ಯವಾಗುವ ಆರ್ಥಿಕ ಸೌಲಭ್ಯಗಳು ಈ ಆದೇಶ ಹೊರಡಿಸಿದ ದಿನಾಂಕದಿಂದ ಮಾತ್ರ ಲಭ್ಯವಾಗುವುದು.

3. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ಮತ್ತು ಕರ್ನಾಟಕ ಸರ್ಕಾರಿ ನೌಕರರ (ಕುಟುಂಬ ನಿವೃತ್ತಿ ವೇತನ) ನಿಯಮಗಳು, 2002 ಗಳಿಗೆ ಸೂಕ್ತ ತಿದ್ದುಪಡಿ ತರಲಾಗುವುದು.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2027

**ಕೆ.ಎಸ್. ಗೋಪಾಲಕೃಷ್ಣ**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ, (ಸೇವೆಗಳು–1)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಎಲ್ಲಾ ಸರ್ಕಾರದ ಸ್ವಾಯತ್ತ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿ ಕೆಲಸ ವೇಳೆಯನ್ನು ನಿಗಧಿಗೊಳಿಸುವ ಬಗೆಗೆ –ಆದೇಶ.

**ಓದಲಾಗಿದೆ :** ಪತ್ರ ಸಂಖ್ಯೆ: ಡಿಎಂಇ/ ಎಂಇಎಸ್ (2)35/2007–08, ದಿನಾಂಕ: 25–9–2007.

**ಪ್ರಸ್ತಾವನೆ :**

ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಮೇಲೆ ಓದಲಾದ ತಮ್ಮ ಪತ್ರದಲ್ಲಿ ಎಲ್ಲಾ ಸರ್ಕಾರದ ಸ್ವಾಯತ್ತ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಕಾಲೇಜುಗಳು 45 ನಿಮಿಷಗಳ ಊಟದ ಬಿಡುವಿನೊಂದಿಗೆ ಪೂರ್ವಾಹ್ನ 10 ರಿಂದ ಅಪರಾಹ್ನ 5.30 ಗಂಟೆಯವರೆಗೆ ಕಾರ್ಯನಿರ್ವಹಿಸುತ್ತಿವೆಯೆಂದು ಆದರೆ ಅವುಗಳಿಗೆ ಹೊಂದಿಕೊಂಡಿರುವ ಆಸ್ಪತ್ರೆಗಳು 45 ನಿಮಿಷಗಳ ಬೋಜನ ವಿರಾಮದೊಂದಿಗೆ ಪೂರ್ವಾಹ್ನ 9 ರಿಂದ ಅಪರಾಹ್ನ 4.00 ಗಂಟೆಯವರೆಗೆ ಕಾರ್ಯನಿರ್ವಹಿಸುತ್ತಿವೆಯೆಂದು ಪ್ರಯುಕ್ತ ಸುಗಮ ಆಡಳಿತಕ್ಕೆ ಮತ್ತು ಸಾರ್ವಜನಿಕರಿಗೆ ಅನಾನುಕೂಲವಾಗುತ್ತಿದೆಯೆಂದು ವರದಿ ಮಾಡುತ್ತಾ ಕಾಲೇಜುಗಳು ಮತ್ತು ಅವುಗಳಿಗೆ ಹೊಂದಿಕೊಂಡ ಆಸ್ಪತ್ರೆಗಳ ಕೆಲಸದ ವೇಳೆಯನ್ನು ಬೋಜನ ವಿರಾಮದೊಂದಿಗೆ ಪೂರ್ವಾಹ್ನ 9 ಗಂಟೆಯಿಂದ ಅಪರಾಹ್ನ 4.00 ಗಂಟೆಯವರೆಗೆ ನಿಗಧಿಪಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಎಲ್ಲಾ ಸರ್ಕಾರದ ಸ್ವಾಯತ್ತ ವೈದ್ಯಕೀಯ/ ದಂತ ವೈದ್ಯಕೀಯ ಕಾಲೇಜುಗಳು ಮತ್ತು ಸಂಶೋಧನಾ ಸಂಸ್ಥೆಗಳು ಮತ್ತು ಅವುಗಳಿಗೆ ಹೊಂದಿಕೊಂಡಿರುವ ಆಸ್ಪತ್ರೆಗಳ ಕೆಲಸದ ಸಮಯವನ್ನು ಏಕರೂಪವಾಗಿ ಪೂರ್ವಾಹ್ನ 9 ಗಂಟೆಯಿಂದ ಅಪರಾಹ್ನ 4.00 ಗಂಟೆಯವರೆಗೆ ನಿಗಧಿಪಡಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 173 ಎಂಎಸ್‌ಎಫ್ 2007, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2007**

ಕರ್ನಾಟಕ ರಾಜ್ಯದ ಸರ್ಕಾರದ ಸ್ವಾಯತ್ತ ಸಂಸ್ಥೆಗಳಾದ ಎಲ್ಲಾ ವೈದ್ಯಕೀಯ/ದಂತ ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಗಳು ಮತ್ತು ಅವುಗಳಿಗೆ ಹೊಂದಿಕೊಂಡಿರುವ ಬೋಧನಾ ಆಸ್ಪತ್ರೆಗಳ ಕೆಲಸದ ವೇಳೆಯನ್ನು 45 ನಿಮಿಷಗಳ ಬೋಜನ ವಿರಾಮದೊಂದಿಗೆ ಪೂರ್ವಾಹ್ನ 9.00 ಗಂಟೆಯಿಂದ ಅಪರಾಹ್ನ 4.00 ಗಂಟೆಯವರೆಗೆ ನಿಗಧಿಗೊಳಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 2047

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)